ಲಲಿತ ಸಾಹಿತ್ಯಮಾಲೆಯ ಮೂವತ್ತೆರಡನೆಯ ಕುಡಿ
( ಏಳನೆಯ ವರುಷದ ನಾಲ್ಕನೆಯ ಕುಡಿ )

## ರಸಿಕ ಶಿಖಾಮಣಿ

# ರಾಜಾ ಪುರೂರವ

[ ವಿಕ್ರಮೋರ್ವಶೀಯ ನಾಟಕದ ಕಥೆ ]



ಗೋವಿಂದ ವೆಂಕಟೇಶ ಚುಳಕಿ



ಲಲಿತ ಸಾಹಿತ್ಯಮಾಲೆ
ಧಾರವಾಡ

ಉತ್ತಮ ಪ್ರತಿ
೨-೪-೦

ಫೆಬ್ರುವರಿ ೧೯೫೨

ಸಾದಾ ಪ್ರತಿ
೧-೮-೦

ಸಂಪಾದಕರು ಮತ್ತು ಪ್ರಕಾಶಕರು :

**ಚುಳಕಿ ಗೋವಿಂದರಾಯರು**

ಲಲಿತ ಸಾಹಿತ್ಯಮಾಲೆ, ಧಾರವಾಡ



ಲಲಿತ ಸಾಹಿತ್ಯಮಾಲೆಯ
ಏಳನೆಯ ವರುಷದ ಐದನೆಯ ಕೃತಿ

# ಪರಿಹಾರ

ಮನೋವಿಶ್ಲೇಷಣಾತ್ಮಕ ಕಾದಂಬರಿ

ಬರೆದವರು :

**ದತ್ತಾತ್ರೇಯ ಕುಲಕರ್ಣಿ**



ಮಾರಾಟಗಾರರು :

**ಮನೋಹರ ಗ್ರಂಥ ಭಾಂಡಾರ, ಧಾರವಾಡ**
**ಕನ್ನಡ ಪುಸ್ತಕಾಲಯ, ಬೆಳಗಾವಿ**

ಮುದ್ರಕರು :

ಎಸ್. ಎಮ್. ಕುಲಕರ್ಣಿ
ಲಲಿತ ಮುದ್ರಣಾಲಯ, ಧಾರವಾಡ

# ಎರಡು ಮಾತು

ಒಬ್ಬ ವೇಶ್ಯೆಯ ನಾದಿಗೆ ಬಲಿಬಿದ್ದು ಹುಚ್ಚನಾದವನೊಬ್ಬನ ಕಥೆಯನ್ನು ಓದುವದರಿಂದ ಬರುವದಾದರೂ ಏನು-ಎಂದು ಯಾರೂ ಕೇಳಬಹುದಾಗಿದೆ. ಒಳ್ಳೆಯವರೂ ಸಹ ಇಂಥದನ್ನೋದಿ ವಿಪರೀತ ಗ್ರಹಕ್ಕೊಳಗಾಗಿ ಒಮ್ಮೊಮ್ಮೆ ಕೆಟ್ಟ ಹಾದಿಯನ್ನು ಹಿಡಿಯುವ ಸಂಭವವೂ ಉಂಟೆಂದು ಸಂಶಯ ತೆಗೆದುಕೊಳ್ಳಬಹುದು. ಇಂಥ ಆರೋಪಗಳು ಮೊಟ್ಟಮೊದಲಿಗೆ ನಿಜವೆಂದು ಕಂಡುಬಂದರೂ ವಸ್ತುತಃ ಅವು ಹಾಗಿರುವದಿಲ್ಲ. ಯಾಕೆಂದರೆ ಇಂಥದೊಂದು ಮಾತು ಕೆಟ್ಟುದು; ಅದನ್ನು ಮಾಡಬಾರದು ಎಂದಿಷ್ಟೇ ಹೇಳಿದರೆ ಜನರ ಮನಸಿನ ಸಮಾಧಾನವಾದೀತು ಎಂದು ಹೇಳಬರದು. ಒಳಿತು ಅಥವಾ ಕೆಡಕು—ಎಂಬ ಯಾವುದೇ ಮಾತಿರಲಿ. ಅದರ ಬಗ್ಗೆ ಅನುಕೂಲ ಅಥವಾ ಪ್ರತಿಕೂಲ ಅಭಿಪ್ರಾಯವಾಗುವದು ಆಯಾ ಉದಾಹರಣೆಗಳನ್ನು ವಿಶೇಷ ರೀತಿಯಿಂದ ವ್ಯಕ್ತಪಡಿಸದೆ ಸಾಧ್ಯವಾಗುವದಿಲ್ಲ.

ಸಾಮಾನ್ಯವಾಗಿ ಸ್ತ್ರೀಯ, ಅದರಲ್ಲೂ ವೇಶ್ಯೆಯರ ನಾದವು ಪುರುಷಮಾತ್ರರಿಗೆ ಸ್ವಲ್ಪಾದರೂ ಸ್ವಲ್ಪ ಹತ್ತುವ ಸಂಭವ ಉಂಟೇ ಉಂಟು. ಇಂಥ ನಾದಿಗೆ ಬಲಿಬಿದ್ದ ಪುರುಷನು ಎಷ್ಟೇ ದೊಡ್ಡವನಿದ್ದರೂ ಅವನ ಸ್ಥಿತಿಯು ಎಷ್ಟು ಶೋಚನೀಯವಾಗುತ್ತದೆಂಬದನ್ನು ರಾಜಾಪುರೂರವನ ಉದಾಹರಣೆಯಿಂದ ತಿಳಿದು ಬರುವಂತಿದೆ. ಯಾವುದೇ ಪುಸ್ತಕದಲ್ಲಿ ಹೆಂಗಸರ ಹೆಸರು, ಅವರ ಮನೋವೇದಕವಾದ ಮಾತುಗಳು ಬಂದ ಮಾತ್ರಕ್ಕೆ ಆ ಪುಸ್ತಕವು ಕುಮಾರ್ಗವನ್ನು ಬೋಧಿಸುತ್ತದೆ—ಎಂದು ಮೂಗುಮುರಿಯುವದು ಸರಿಯಲ್ಲ.

ಸಾಮಾನ್ಯವಾಗಿ ಈ ಸಂಸಾರದಲ್ಲಿರುವ ಮನುಷ್ಯಪ್ರಾಣಿಗೆ ಅನೇಕ ವಿಷಯಗಳ ಜ್ಞಾನವಿರಬೇಕು. ಒಳಿತಾವುದು, ಕೆಡುಕಾವುದು ಎಂಬದರ ತಾರತಮ್ಯ ಜ್ಞಾನವೂ ಬೇಕು. ಕೆಡುಕಿನ ಪರಿಣಾಮವು ಹೇಗಾಗುತ್ತದೆಂಬುದರ ಕಡೆಗೆ ಲಕ್ಷ್ಯವೂ ಇರಬೇಕು. ಅಂದರೆ ಮಾನವನ ಬೌದ್ಧಿಕ ವಿಕಾಸವು ಬೆಳೆಯುತ್ತದೆ.

ಇಲ್ಲಿ ಬರುವ ವೇಶ್ಯೆ ದೇವಲೋಕದ ಅಪ್ಸರೆ. ಅವಳ ಜೀವನವನ್ನು ಸೂಕ್ಷ್ಮವಾಗಿ ಗಮನಿಸಿದರೆ-ವೇಶ್ಯೆ ಎಂಬ ಹೆಸರನ್ನಷ್ಟು ಮರೆತುಬಿಟ್ಟರೆ ಕುಲವಧುವಿನ ಮಾರಿಯ ಮೇಲೆ ಹೊಡೆಯುವಷ್ಟು ಅವಳ ದಾಂಪತ್ಯ ಜೀವನವು ಪವಿತ್ರತಮವಾಗಿದೆ — ಎಂದು ಕಂಡುಬರುವಂತಿದೆ.

ಕಾದಂಬರಿ ಎಂದ ಮಾತ್ರಕ್ಕೆ ಸ್ತ್ರೀ—ಪುರುಷರ ಜೀವನ ಸಂಗ್ರಾಮದ ಕೋಲಾಹಲವೇ ಎಂಬ ಅಭಿಪ್ರಾಯವು ಬೇರೂರಿ ಬಿಟ್ಟಿವೆ. ಕಾಲಿದಾಸ ಮಹಾಕವಿಯ ವಿಕ್ರಮೋರ್ವಶೀಯವೂ, ಶೂದ್ರಕ ಕವಿಯ ಮೃಚ್ಛಕಟಿಕವೂ ವೇಶ್ಯಾಜೀವನವನ್ನು ಚಿತ್ರಿಸುವ ಹಳೆಯ ಕಥಾನಕಗಳಾಗಿವೆ.

ಇತ್ತೀಚೆ ಕನ್ನಡ ಸಾಹಿತ್ಯದಲ್ಲಿ ವೇಶ್ಯಾಜೀವನವನ್ನು ಕುರಿತು ಬರೆಯಲಾದ ಕಾದಂಬರಿಗಳು ತಲೆದೋರತೊಡಗಿವೆ. ಅಂಥವುಗಳಲ್ಲಿ ಇದು ಹಳೆಯದಾದರೂ ಅಳಿಯದ ಕಥಾವಸ್ತು ಎಂದು ಬಗೆದು ನಾನು ಈ ನಾಟಕವನ್ನು ಕಾದಂಬರಿ ರೂಪವಾಗಿ ಪ್ರಕಟಿಸಲು ಸಾಹಸಮಾಡಿದ್ದೇನೆ.

ಕವಿಕುಲಗುರು ಕಾಲಿದಾಸನ ಕೃತಿಗಳು ಕನ್ನಡದಲ್ಲಿ ಹಲವಾರು ವೇಷತಾಳಿ ಮೆರೆಯುತ್ತಲಿವೆ. 'ರಘುವಂಶ ರಹಸ್ಯ' 'ಶಕುಂತಳೆ' ಈ ರೀತಿಯಾಗಿ ಗದ್ಯಶೈಲಿಯಲ್ಲಿ ಪ್ರಕಟವಾಗಿವೆ. ಈಗ ನಾನು ವಿಕ್ರಮೋರ್ವಶೀಯವನ್ನು ಆ ರೀತಿಯ ಕಥನ ಶೈಲಿಯಲ್ಲಿ ಪ್ರಕಟಿಸಿದ್ದೇನೆ.

ಮೊದಲೇ ಕಾಲಿದಾಸನ ಕೃತಿ ! ಅದನ್ನು ನನ್ನ ಅಲ್ಪ ಬುದ್ಧಿಗನುಸರಿಸಿ ಆಧರಿಸಿ ಬರೆದಿದ್ದೇನೆ. ಮೂಲಕೃತಿಗೆ ಅನ್ಯಾಯವಾಗದಂತೆ ಎಚ್ಚರಿಕೆ ತೆಗೆದುಕೊಂಡರೂ ಸಾಕಷ್ಟು ದೋಷಗಳು ಉಳಿದಿರಲು ಸಾಕು. ಆ ದೋಷ ಪರಿಹರಿಸಲು ಕವಿಕಾಲಿದಾಸನಲ್ಲಿ ಕ್ಷಮೆಯನ್ನು ಯಾಚಿಸಿ, ಕನ್ನಡ ವಾಚಕರು ಕಾಲಿದಾಸನ ಕಿಂಚಿತ್ ರಸವನ್ನಾದರೂ ಗ್ರಹಿಸಲಿ ಎಂದು ಬಿನ್ನವಿಸಿ ಕೊಂಡಿದ್ದೇನೆ.

**— ಗೋ. ವೆ. ಚುಳಕಿ**

# ಪ್ರಸ್ತಾವನೆ

ಮಹಾಕವಿ ಕಾಲಿದಾಸನು ರಚಿಸಿದ ವಿಕ್ರಮೋರ್ವಶೀಯ ಎಂಬ ತ್ರೋಟಕದ ಆಧಾರದಿಂದ ಈ ರಾಜಾಪುರೂರವವು ರಚಿತವಾಗಿದೆ.

ಕಾಲಿದಾಸ ಕವಿಯು ಮಾಲವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ, ಶಾಕುಂತಲವೆಂಬ ಮೂರು ನಾಟಕಗಳನ್ನು ರಚಿಸಿದ್ದಾನೆ. ಕವಿಯ ರಚನೆಯನ್ನು ತಾರತಮ್ಯ ದೃಷ್ಟಿಯಿಂದ ಅವಲೋಕಿಸಿದರೆ ಈ ಮೂರೂ ನಾಟಕಗಳನ್ನು ಯಾವ ಕ್ರಮಹಿಡಿದು ರಚಿಸಿದ್ದಾನೆಂಬ ಮಾತಿನ ಬಗ್ಗೆ ಸಂದೇಹವುಂಟಾಗುವಂತಿದೆ. ಮಾಲವಿಕಾಗ್ನಿಯ ಪ್ರಸ್ತಾವನೆಯ ಮೇಲಿಂದಲೂ, ಅಲ್ಲಿಯ ರಸಪರಿಪಾಕ ದೃಷ್ಟಿಯಿಂದಲೂ ಕಾಲಿದಾಸನು ಆ ನಾಟಕವನ್ನು ಮೊಟ್ಟಮೊದಲಿಗೆ ರಚಿಸಿರಬೇಕೆಂದೂ, ಆಗ ಅವನು ಅಷ್ಟೊಂದು ಪ್ರಸಿದ್ಧಿಯನ್ನು ಹೊಂದಿದ್ದಿಲ್ಲೆಂದೂ ಹೇಳಬೇಕಾಗುತ್ತದೆ. ಅದರ ತರುವಾಯ ಈ ವಿಕ್ರಮೋರ್ವಶೀಯವು ರಚಿತವಾಗಿರಬೇಕೆಂದು ಕಾಣುತ್ತದೆ. ಈ ಹೊತ್ತಿಗೆ ಕಾಲಿದಾಸನ ಕಾವ್ಯರಚನೆಯು ಲೋಕಪ್ರಿಯವಾಗಿ, ಸರ್ವರಿಗೂ ಮಾನ್ಯವಾದಂತೆ ಅದರ ಪ್ರಸ್ತಾವನೆಯ ಮೇಲಿಂದ ಕಂಡುಬರುತ್ತದೆ.

ಮಾಲವಿಕಾಗ್ನಿಮಿತ್ರದಲ್ಲಿ ಸೂತ್ರಧಾರನು ಸಭೆಯ ಆಜ್ಞೆಯ ಮೇರೆಗೆ ಕಾಲಿದಾಸನು ರಚಿಸಿದ ಮಾಲವಿಕಾಗ್ನಿಮಿತ್ರ ನಾಟಕದ ಪ್ರಯೋಗವನ್ನು ನಾನು ಆಡಿ ತೋರಿಸುತ್ತೇನೆ. ಎಂದು ಹೇಳಿದ್ದಾನೆ. ಅದಕ್ಕೆ ಅವನ ಸಂಗಡಿಗನಾದ ಪಾರಿಪಾರ್ಶ್ವಕನು 'ಛೇ ! ಛೇ ! ಹಾಗೆ ಮಾಡಬೇಡ. ಯಾರ ಯಶೋದುಂದುಭಿಯು ಎಲ್ಲ ಕಡೆಗೂ ಕೇಳಬರುತ್ತಿದೆಯೋ ಅಂಥ ಭಾಸ, ಸೌಮಿಲ್ಲ, ಕವಿಪುತ್ರ ಇವರೇ ಮೊದಲಾದ ಪ್ರಾಚೀನ ಕವಿಗಳು ರಚಿಸಿದ ನಾಟಕಗಳನ್ನು ಬಿಟ್ಟು, ಆಧುನಿಕ ಕವಿ ಕಾಲಿದಾಸನ ಕೃತಿಯನ್ನು ಸಾಮಾಜಿಕರು ಮೆಚ್ಚುವರೇ ?' ಎಂದು ಕೇಳುತ್ತಾನೆ. ಇದರ ಮೇಲಿಂದ ಕಾಲಿದಾಸನು ಆಗ ಪ್ರಸಿದ್ಧಿ ಪಡೆದಿದ್ದನೋ ಇಲ್ಲವೋ ಎಂದು ಸಂಶಯವನ್ನು ತೆಗೆದುಕೊಳ್ಳಲು ಅವಕಾಶವಿದೆ.

ವಿಕ್ರಮೋರ್ವಶೀಯ ನಾಟಕದ ಪ್ರಸ್ತಾವನೆಯಲ್ಲಿಯೂ ಸೂತ್ರಧಾರನು ಸಾಮಾಜಿಕರನ್ನು ಕುರಿತು 'ನಮ್ಮ ಮೇಲೆ ಪ್ರೇಮವನ್ನೂ ಅಭಿಮಾನವನ್ನೂ ಇಟ್ಟು ಈ ತ್ರೋಟಕದಲ್ಲಿ ಬರುವಂಥ ಕಾಲಿದಾಸನಿಂದ ರಚಿತವಾದ ಉತ್ತಮ ಕಥಾನಕವನ್ನು ತಾವು ಲಕ್ಷ್ಯಪೂರ್ವಕವಾಗಿ ಶ್ರವಣಮಾಡಬೇಕು' ಎಂದಿರುವದರಿಂದ ಕಾಲಿದಾಸನ ವಿಷಯದಲ್ಲಿ ಜನೇಚ್ಛೆಯು ಸಾನುಕೂಲವಾಗಿರಬೇಕೆಂದೂ, ಅವನಿಗೆ ಮಾನ್ಯತೆಯು ದೊರೆತಿತ್ತೆಂದೂ ಧ್ವನಿತವಾಗುತ್ತದೆ. ಇವೆರಡೂ ನಾಟಕಗಳ ತರುವಾಯ ಶಾಕುಂತಲವು ರಚಿತವಾದುದಾಗಿದೆ. ಈ ವೇಳೆಗಂತೂ ಅವನ ಕೀರ್ತಿಧ್ವಜವು ಎಲ್ಲ ಕಡೆಗೂ ಪಸರಿಸಿತ್ತೆಂಬುದರಲ್ಲಿ ಸಂಶಯವೇ ಇಲ್ಲ.

ವಿಕ್ರಮೋರ್ವಶೀಯು ನಾಟಕವೆಂದು ಕರೆಯಲ್ಪಡುತ್ತದೆ. ಯಾವ ಕಾವ್ಯದಲ್ಲಿ ಸಂವಿಧಾನಕ ಪಾತ್ರಗಳ ಮುಖಾಂತರ ಪ್ರೇಕ್ಷಕರ ಸಮ್ಮುಖದಲ್ಲಿ ಪ್ರತ್ಯಕ್ಷವಾಗಿ ಆಡಿತೋರಿಸಲು ಬರುತ್ತಿದೆಯೋ ಅಂಥದಕ್ಕೆ ಸಾಹಿತ್ಯ ಶಾಸ್ತ್ರಕಾರರು ದೃಶ್ಯಕಾವ್ಯವೆಂದು ಕರೆದಿದ್ದಾರೆ. ಈ ದೃಶ್ಯಕಾವ್ಯದಲ್ಲಿ ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ ಮೊದಲಾದ ಹತ್ತು ಭೇದಗಳ ವರ್ಣನೆ ಬರುತ್ತದೆ. ಇವುಗಳಿಗೆ ಪ್ರತ್ಯೇಕವಾದ ಲಕ್ಷಣಗಳೂ ಹೇಳಲ್ಪಟ್ಟಿವೆ. ತ್ರೋಟಕವು ಮಾತ್ರ ಈ ಹತ್ತು ಭೇದಗಳಲ್ಲಿ ಕಂಡುಬರುವದಿಲ್ಲ. ಆದರೂ ತ್ರೋಟಕವು ನಾಟಕದಲ್ಲಿಯ ಒಂದು ಪ್ರಭೇದವಾಗಿದೆ. ಇದರ ಲಕ್ಷಣವು ಸಾಹಿತ್ಯ ದರ್ಪಣದಲ್ಲಿ ಈ ರೀತಿ ಇದೆ: 'ತ್ರೋಟಕದಲ್ಲಿ ಏಳು, ಎಂಟು, ಒಂಬತ್ತು ಇಲ್ಲವೆ ಐದು ಅಂಕುಗಳು ಇರಬೇಕು. ಅಲ್ಲದೆ ಇಲ್ಲಿಯ ಮುಖ್ಯ ಪಾತ್ರವು ದೇವತಾಂಶವಿದ್ದು ಅದಕ್ಕೆ ಮಾನವ ಸಮಾಗಮವಾಗಿರಬೇಕು. ಮತ್ತು ಪ್ರತಿಯೊಂದು ಅಂಕಿನಲ್ಲಿಯೂ ವಿದೂಷಕನ ಪಾತ್ರವು ಇದ್ದೇತೀರಬೇಕು. ಅಂದರೆ ಅದು ತ್ರೋಟಕವೆಂದೆನಿಸಿಕೊಳ್ಳುವದು. ಉತ್ತರ ಪ್ರದೇಶದಲ್ಲಿ ದೊರೆತ ಹಸ್ತಕೃತಿಯ ಮೇಲೆ ತ್ರೋಟಕವೆಂದೂ, ದಕ್ಷಿಣದಲ್ಲಿ ದೊರೆತ ಹಸ್ತಕೃತಿಯ ಮೇಲೆ ನಾಟಕವೆಂದೂ ಬರೆಯಲಾಗಿದೆ ಎಂದು ಸಂಶೋಧಕರು ಹೇಳುತ್ತಾರೆ.

ಈ ವಿಕ್ರಮೋರ್ವಶೀಯದಲ್ಲಿ ಈ ತ್ರೋಟಕದ ಲಕ್ಷಣಗಳೆಲ್ಲವೂ ಇವೆ. ಆದರೆ ವಿದೂಷಕನ ಪಾತ್ರವು ಪ್ರತಿಯೊಂದು ಅಂಕಿನಲ್ಲಿಯೂ ಕಾಣಬರುವದಿಲ್ಲ. ಇದರ ನಾಲ್ಕನೆಯ ಅಂಕಿನಲ್ಲಿ ವಿದೂಷಕನ ಪ್ರವೇಶವೇ ಇರುವದಿಲ್ಲ.

ದೇವ ಮತ್ತು ಮಾನವರ ಸಮಾಗಮವಾಗುವದೇ ಈ ತ್ರೋಟಕದ ಮುಖ್ಯ ಲಕ್ಷಣವೆಂದು ಹೇಳಬಹುದು. ಒಂದು ಲಕ್ಷಣದ ಅಭಾವವಿದೆ ಎಂದ ಮಾತ್ರಕ್ಕೆ ಯಾವ ಹಾನಿ ಆಗಲಾರದು. ರಾಜನಾದ ಪುರೂರವನು ದೇವತಾ ಪುತ್ರನಾದರೂ ಮಾನವರಲ್ಲಿ ಗಣಿಸಲ್ಪಟ್ಟ ಕಾರಣ ಅವನೇ ಮುಖ್ಯನಾಯಕ ನಾಗಿದ್ದಾನೆ. ನಾಯಿಕೆಯು ಉರ್ವಶಿ. ಅವಳಂತೂ ದೇವತೆಯೇ ಆಗಿದ್ದಾಳೆ. ಇವರಿಬ್ಬರ ಸಮಾಗಮವು ಈ ಕಥಾನಕದಲ್ಲಿ ಬಂದಿದೆ. ಆದಕಾರಣ ಇದು ತ್ರೋಟಕವೆಂದು ತಿಳಿಯಲು ಯಾವ ಬಾಧಕವೂ ಬರಲಾರದು.

ವಿಕ್ರಮೋರ್ವಶೀ ತ್ರೋಟಕದಲ್ಲಿ ಅಪ್ಸರೆಯಾದ ಉರ್ವಶಿಯ ಸಮಾಗಮವನ್ನು ಹೊಂದಿದ ರಸಿಕ ಶಿಖಾಮಣಿಯಾದ ಪುರೂರವರಾಜನ ರಸವತ್ತಾದ ವರ್ಣನೆಯು ಬಹು ಸುಂದರವಾಗಿ ಬಂದಿದೆ. ಪುರೂರವರಾಜನು ಬಹು ಪ್ರಾಚೀನ ಕಾಲದವನು; ಮೊದಲನೆಯ ರಾಜನು. ಅಂದರೆ ಸೋಮವಂಶದ ಆದ್ಯರಾಜನು ಇವನ ಚರಿತ್ರೆಯು ಪುರಾಣಗಳಲ್ಲಿ ಪ್ರಖ್ಯಾತವಿದೆ. ಆರ್ಯರ ಗ್ರಂಥಗಳಲ್ಲಿ ಅತಿ ಪ್ರಾಚೀನವೂ ಮೊಟ್ಟಮೊದಲಿನದೂ ಆದ ಋಗ್ವೇದ ದಲ್ಲಿಯೂ ಈ ಪುರೂರವನ ಚರಿತ್ರೆಯು ಉಪಲಬ್ಧವಿದೆ. ಪುರೂರವ–ಉರ್ವಶಿ ಯರ ಸಮಾಗಮವಾಗಿ, ಮುಂದೆ ವಿಯೋಗವಾದ ಕಾಲದಲ್ಲಾದ ಸಂವಾದವು ಋಗ್ವೇದದಲ್ಲಿದೆ. ಇಂಥ ರಾಜನ ಅಲ್ಪ ಚರಿತ್ರೆಯನ್ನು ಇಲ್ಲಿ ಕೊಟ್ಟರೆ ಅಪ್ರಸ್ತುತವಾಗಲಾರದೆಂದು ಬಗೆದು ಸ್ವಲ್ಪ ಕೂಡಲಾಗಿದೆ. ಇದರಿಂದ ಈ ನಾಟಕದ ಸಂವಿಧಾನಕ ರಚನೆಯಲ್ಲಿ ಕವಿಯ ಚಾತುರ್ಯವು ಕಂಡುಬರಲು ಅನುಕೂಲವಾಗುತ್ತದೆ.

ಪುರೂರವರಾಜನು ಪ್ರತಿಷ್ಠಾನ (ಪೈಠಣ) ರಾಜ್ಯಗೆಯ್ಯುತ್ತಿರುವಾಗ ಅವನ ಕೀರ್ತಿಯು ಎಲ್ಲೆಲ್ಲಿಯೂ ಹಬ್ಬಿತ್ತು. ಒಂದಾನೊಂದು ದಿವಸ ನಾರದರು ಇಂದ್ರನ ಸಭೆಯಲ್ಲಿ ಪುರೂರವನ ಗುಣಗಳನ್ನು ವಿಶೇಷವಾಗಿ ಕೊಂಡಾಡಿದರು. ಆ ವರ್ಣನೆಯನ್ನು ಕೇಳಿದ ಉರ್ವಶಿಯು ಕಾಮಾತುರಳಾಗಿ ಈ ರಾಜನ ಬಳಿಗೆ ಆಗಮಿಸಿದಳು. ಉರ್ವಶಿಗೆ ಮಿತ್ರಾವರುಣಋಷಿಯ ಶಾಪವು ತಟ್ಟಿತ್ತಾದುದರಿಂದ ಅವಳು ಕೆಲವು ದಿನಗಳ ವರೆಗೆ ಮಾನವಲೋಕದಲ್ಲಿ ವಾಸಿಸುವ ಪ್ರಸಂಗವೂ ಬಂದಿತ್ತು. ಅಕಸ್ಮಾತ್ತಾಗಿ ಆಗಮಿಸಿದ ಉರ್ವಶಿಯನ್ನು

ಕಂಡು ರಾಜನು ಚಕಿತನಾದನು. ಬಂದಂಥವಳನ್ನು ಆದರದಿಂದ ಬರಮಾಡಿ ಕೊಂಡನು. ನಾರದರು ಹೊಗಳಿದ ರಾಜನ ಗುಣಗಳಿಗೆ ಮನಸೋತವಳಾದ ಉರ್ವಶಿಯು ರಾಜನ ಸನ್ನಿಧಿಯಲ್ಲಿರಲು ಒಪ್ಪಿಕೊಂಡಳು. ಆದರೆ ಮೂರು ಕರಾರುಗಳನ್ನು ಹಾಕಿದಳು. 'ನಾನು ಸಾಕಿರುವ ಎರಡು ಕಪ್ಪೆಗಳನ್ನು ಚೆನ್ನಾಗಿ ರಕ್ಷಿಸಬೇಕು. ನಾನು ತುಪ್ಪದಹೊರತಾಗಿ ಬೇರಾವ ಆಹಾರವನ್ನು ತೆಗೆದುಕೊಳ್ಳುವದಿಲ್ಲ. ಮತ್ತು ಸಮಾಗಮದ ಸಮಯವನ್ನು ಬಿಟ್ಟು ಉಳಿದ ಹೊತ್ತಿನಲ್ಲಿ ವಸ್ತ್ರರಹಿತರಾದ ನಿಮ್ಮನ್ನು ಅವಲೋಕಿಸುವದಿಲ್ಲ' ಎಂಬ ತನ್ನ ನಿಯಮಗಳನ್ನು ಅವಳು ರಾಜನಿಗೆ ಹೇಳಿದಳು. ರಾಜನು ಅವುಗಳೆಲ್ಲವನ್ನು ಮನ್ನಿಸಿ ಆಕೆಯೊಡನೆ ವಿಷಯೋಪಭೋಗದಲ್ಲಿ ಮಗ್ನನಾದನು.

ಇಂದ್ರನು ತನ್ನ ಸಭೆಗೆ ಭೂಷಣಪ್ರದಳಾದ ಉರ್ವಶಿಯು ಇಲ್ಲದುದನ್ನು ಕಂಡು ಆಕೆಯನ್ನು ಕರೆತರಲು ಗಂಧರ್ವನಿಗೆ ಆಜ್ಞೆ ಮಾಡಿದನು. ಆಗ ಆ ಗಂಧರ್ವನು ಪುರೂರವನಲ್ಲಿಗೆ ರಾತ್ರಿಯಲ್ಲಿ ಬಂದು ಉರ್ವಶಿಯು ರಾಜನ ಸ್ವಾಧೀನ ಪಡಿಸಿದ ಎರಡೂ ಕಪ್ಪೆಗಳನ್ನು ಅಪಹರಿಸಿದನು. ಆಗ ಆ ಕಪ್ಪೆಗಳು ವಿಪರೀತ ಆಕ್ರೋಶಮಾಡಿದವು. ಆ ಧ್ವನಿಯನ್ನು ಕೇಳಿ ಉರ್ವಶಿಯು ಎಚ್ಚತ್ತು 'ನಾನು ಹೇಡಿ ಪುರುಷನನ್ನು ಆಶ್ರಯಿಸಿ ಹಾಳಾದೆನು. ತುಡುಗರು ನನ್ನ ಮಕ್ಕಳನ್ನು ಕದ್ದರು. ಹೆಂಗಸರು ಹಗಲು ಮೈಮೇಲೆ ಎಚ್ಚರಿಲ್ಲದೆ ಮಲಗುವಂತೆ ಇವನು ಗಂಡಸಿದ್ದು ರಾತ್ರಿಯಲ್ಲಿ ಮೈಮೇಲೆ ಎಚ್ಚರವಿಲ್ಲದೆ ಮಲಗಿಕೊಂಡಿರುವವನಲ್ಲ!' ಎಂದು ರಾಜನನ್ನು ಕಡೆಗಣಿಸಿ ಮಾತನಾಡಿದಳು.

ಉರ್ವಶಿಯ ಈ ವಾಗ್ಬಾಣವನ್ನು ಕೇಳಿ ಗಾಢವಾಗಿ ನಿದ್ರಿಸುತ್ತಿದ್ದ ರಾಜನು ಗಡಬಡಿಸಿಕೊಂಡೆದ್ದು, ಕೈಯಲ್ಲಿ ಕತ್ತಿಯನ್ನು ಹಿರಿದು ಕಪ್ಪೆಕಳ್ಳನನ್ನು ಹೊಡೆಯಲು ಹೊರಟೇಬಿಟ್ಟನು. ಗಂಧರ್ವನಿಗೆ ಕಪ್ಪೆಗಳನ್ನು ಕದಿಯಬೇಕೆಂದಿರಲಿಲ್ಲ. ಏನಾದರೂ ಮಾಡಿ ಉರ್ವಶಿಯು ಹಾಕಿದ ನಿಯಮಗಳನ್ನು ರಾಜನು ಮುರಿದರೆ ಸಾಕು ಎಂದು ಗಂಧರ್ವನ ಎಣಿಕೆಯಾಗಿತ್ತು. ಅದರಿಂದ ಅವನು ಕಪ್ಪೆಗಳನ್ನು ಕದ್ದಿದ್ದನು. ರಾಜನು ಬೆನ್ನಟ್ಟಿ ಬಂದುದರಿಂದ ಗಂಧರ್ವನು ಆ ಕಪ್ಪೆಗಳನ್ನು ಬಿಟ್ಟುಕೊಟ್ಟನು.

ಕಪ್ಪೆಗಳ ರಕ್ಷಣೆಯಾಗಿರದಿದ್ದರೆ ರಾಜನು ನಿಯಮವನ್ನು ಮುರಿದಂತಾಗುತ್ತಿತ್ತು. ಆದರೆ ರಾಜನು ಅವುಗಳನ್ನು ಬಿಡಿಸಿಕೊಂಡು ತಂದುದರಿಂದ ಗಂಧರ್ವನು ಬೇರೆ ಯುಕ್ತಿಯನ್ನು ಹೂಡಬೇಕಾಯಿತು. ರಾಜನು ವಸ್ತ್ರರಹಿತನಾಗಿಯೇ ಆ ಕಪ್ಪೆಕಳ್ಳನ ಬೆನ್ನುಹತ್ತಿದನು. ರಾತ್ರಿಯ ಹೊತ್ತು-ಕತ್ತಲೆಯಿದ್ದುದರಿಂದ ಉರ್ವಶಿಗೆ ರಾಜನು ವಸ್ತ್ರರಹಿತನಾಗಿದ್ದುದು ಕಂಡು ಬರುವಂತಿರಲಿಲ್ಲ. ಆದರೂ ಗಂಧರ್ವನು ಕಪ್ಪೆಗಳನ್ನು ತಿರುಗಿ ತೆಗೆದುಕೊಂಡು ಬರುತ್ತಿರುವ ರಾಜನ ಮೈಮೇಲೆ ಮಿಂಚಿನ ಪ್ರಕಾಶವನ್ನು ಕೆಡವಿದನು. ಅದರಿಂದ ಅವಳಿಗೆ ರಾಜನ ನಗ್ನಾವಸ್ಥೆಯು ಕಂಡುಬಂದಿತು. ಅದರಿಂದ ನಿಯಮೋಲ್ಲಂಘನೆಯಾಯಿತೆಂದು ಅವಳು ಹಾಸಿಗೆಯಲ್ಲಿಂದಲೇ ಅದೃಶ್ಯಳಾಗಿ ಸ್ವರ್ಗಲೋಕಕ್ಕೆ ಹೊರಟುಹೋದಳು. ಈ ಪ್ರಕಾರದಿಂದ ಪುರೂರವ—ಉರ್ವಶಿಯರಲ್ಲಿ ವಿಯೋಗವುಂಟಾಯಿತು.

ಅವಳು ಕೈಬಿಟ್ಟು ತೆರಳಿದ್ದರಿಂದ ರಾಜನಿಗೆ ಹುಚ್ಚೇ ಹಿಡಿಯಿತು. ಅವನು ಉರ್ವಶಿಯ ಜಪವನ್ನೇ ಮಾಡುತ್ತ ಕುರುಕ್ಷೇತ್ರಕ್ಕೆ ಬಂದುಬಿಟ್ಟನು. ಅಲ್ಲಿ ಅವನಿಗೆ ಒಂದು ಸರೋವರದ ತೀರದಲ್ಲಿ ಐವರು ಸಖಿಯರೊಂದಿಗಿದ್ದ ಉರ್ವಶಿಯ ದರ್ಶನವಾಯಿತು. ಆಗ ಅವನು ಬಹು ಕಕ್ಕುಲತೆಯಿಂದ ' ಕಠೋರ ಮನಸ್ಸಿನ ಸ್ತ್ರೀಯೇ, ಸ್ವಲ್ಪ ನಿಲ್ಲು. ನಾವಿಬ್ಬರೂ ಒಂದೆಡೆ ಕುಳಿತು ಮಾತನಾಡೋಣ. ನಾನೀಗ ಆಡಲಿರುವ ಮಾತುಗಳನ್ನು ಈವರೆಗೂ ನೀನು ಕೇಳಿರುವದಿಲ್ಲ. ನೀನು ನನ್ನನ್ನು ತ್ಯಜಿಸಬೇಡ. ಇನ್ನೂ ನನಗೆ ತೃಪ್ತಿಯಾಗಿರುವದಿಲ್ಲ. ನೀನಿಲ್ಲದೆ ಅತ್ಯಂತ ದುಃಖಕ್ಕೀಡಾದ ನನ್ನ ಉತ್ತಮ ಶರೀರವು ಇಲ್ಲಿಯೇ ಪತನಹೊಂದೀತು. ನೀನು ನನ್ನ ಮೇಲೆ ಪ್ರಸನ್ನಳಾಗದಿದ್ದರೆ ಈ ದೇಹವನ್ನು ನಾಯಿ-ನರಿಗಳು ಹರಿದು ತಿನ್ನುವವು ' ಎಂದು ತನಗಾದ ದುಃಖವನ್ನು ರಾಜನು ತೋಡಿಕೊಂಡನು.

' ಹಾಂ ಹಾಂ ! ಹಾಗೆ ಮಾಡಬಾರದು. ಗಂಡಸಾದವನು ಈ ರೀತಿ ಮರಣಕ್ಕೆ ಈಡಾಗುವದು ಬೇಡ. ನಾಯಿ ನರಿಗಳು ನಿನ್ನನ್ನು ಮುಟ್ಟದಿರಲಿ. ಹೆಂಗಸರ ಸ್ನೇಹವು ಸ್ನೇಹವೆಂದು ಯಾರಾದರೂ ತಿಳಿದುಕೊಂಡಿದ್ದಾರೆಂಬ ಮಾತನ್ನಷ್ಟು ವಿಚಾರಮಾಡಿ ನೋಡು. ಹೆಂಗಸರ ಹೃದಯವು ತೋಳನ

ಹೃದಯದಂತಿದೆ. ಸ್ತ್ರೀಯರು ಸ್ವಭಾವತಃ ನಿರ್ದಯರೂ ಕಠೋರರೂ ಸಾಹಸ ಪ್ರಿಯರೂ ಆಗಿರುತ್ತಾರೆ. ಕಿಂಚಿತ್ ಕಾರಣದ ಸಲುವಾಗಿ—ಹೆಂಗಸರು ಗಂಡನೇ ಇರಲಿ, ಅಣ್ಣತಮ್ಮಂದಿರೇ ಇರಲಿ, ತಂದೆಯೇ ಇರಲಿ ಅವರ ಘಾತ ವನ್ನು ಮಾಡಲು ಹಿಂದೆಮುಂದೆ ನೋಡಲಾರರು. ಅದರಲ್ಲಂತೂ ನಾವು ಅಪ್ಸರೆಯರು. ಮನಬಂದಂತೆ ವರ್ತಿಸುವವರು. ನಮಗೆ ಹೊಸ ಹೊಸ ಗಂಡ ಸರ ಅಪೇಕ್ಷೆಯಂತೂ ಬಹಳ ಇರುತ್ತದೆ. ಆದಕಾರಣ ನನ್ನಂಥವಳ ಸಲು ವಾಗಿ ನೀನು ಜೀವವನ್ನು ನಾಶಗೊಳಿಸಬೇಕೆಂಬುದೇನು ನನಗೆ ಚೆನ್ನಾಗಿ ಕಾಣುವದಿಲ್ಲ. ನಿನ್ನ ಜೀವನವನ್ನು ಅವಲಂಬಿಸಿ ಲಕ್ಷೋಪಲಕ್ಷ ಜೀವಿಗಳು ಬದುಕಿಕೊಂಡಿವೆ. ಧೈರ್ಯವನ್ನು ತಂದುಕೊಂಡು ಬಲುದಿನ ಬಾಳಿ ಬದುಕಿ ಪ್ರಜೆಗಳನ್ನು ಪರಿಪಾಲಿಸು. ಧರ್ಮಾಚರಣೆಯನ್ನು ಮಾಡಿ ಧರ್ಮಸ್ಥಾಪನೆ ಯನ್ನು ಮಾಡು. ಇಂಥ ಅನೇಕ ಅಮೋಘ ಕಾರ್ಯಗಳನ್ನೆಸಗದೆ ಹೆಂಗಸ ರಂತೆ ಜೀವಕೊಡುತ್ತೇನೆನ್ನುವದು ನಿನಗೆಷ್ಟೂ ಶೋಭಿಸುವದಿಲ್ಲ' ಎಂದು ಉರ್ವಶಿಯು ಸ್ಪಷ್ಟವಾಗಿ ಮಾತನಾಡಿದಳು.

ರಾಜನಿಗೇನಾದರೂ ಬುದ್ಧಿ ಬಂದೀತೆಂದು ಬಗೆದು ಉರ್ವಶಿಯು ನಾನಾ ತರಹದಿಂದ ಅವನಿಗೆ ಬೋಧಿಸಿದರೂ ಅವನು ಅವಳನ್ನು ಬಿಡಲೇ ಇಲ್ಲ. ಆಗ ಅವಳು ಇಂದಿನಿಂದ ಒಂದು ವರ್ಷದ ಮೇಲೆ ಒಂದೇ ರಾತ್ರಿ ಸಮಾ ಗಮವಾಗಲಿ—ಎಂದು ಅವನಿಗೆ ಹೇಳಿ ಹೊರಟುಹೋದಳು. ಉರ್ವಶಿಯು ಈ ಹೊತ್ತಿನಲ್ಲಿ ಗರ್ಭಿಣಿಯಾಗಿದ್ದಳು. ವರ್ಷದ ನಂತರ ರಾಜನು ಅಲ್ಲಿಗೆ ಪುನಃ ಬಂದನು. ಆಗ ಅಲ್ಲಿ ಉರ್ವಶಿಯ ಗಂಟು ಬಿದ್ದಿತು. ಸೂರ್ಯೋದಯ ವಾಗುತ್ತಲೆ ಅವಳ ವಿಯೋಗವಾಗುವದೆಂದು ರಾಜನು ಒಂದೇ ಸವನೆ ಕಣ್ಣೀರು ಹಾಕುತ್ತಿದ್ದನು. ಅದನ್ನು ಕಂಡು ಮನಕರಗಿದ ಉರ್ವಶಿಯು 'ಗಂಧರ್ವನ ಆರಾಧನೆಯನ್ನು ಮಾಡು ಅಂದರೆ ನಾನು ನಿನಗೆ ಲಭ್ಯವಾಗು ವೆನು' ಎಂದು ಹೇಳಿ ಬೆಳಗಾಗುತ್ತಲೆ ಹೊರಟುಹೋದಳು. ರಾಜನು ಗಂಧರ್ವನನ್ನು ಆರಾಧಿಸಲು ಅವನು ರಾಜನಿಗೆ ಅಗ್ನಿಯ ಥಾಲಿಯೊಂದನ್ನು ದಯಪಾಲಿಸಿದನು. ರಾಜನಿಗಂತೂ ಉರ್ವಶಿಯೇ ದೊರಕಿದಳೆಂಬ ಭಾವನೆ ಯಾಗಿತ್ತು. ರಾಜನಿಗೆ ಹುಚ್ಚೇ ಹಿಡಿದಿತ್ತು. ಆ ಥಾಲಿಯನ್ನು ಮನೆಯಲ್ಲಿಟ್ಟು ಅರಣ್ಯದಲ್ಲಿ ಸಂಚರಿಸಿ ಮನೆಗೆ ಮರಳಿದನು.

ಈ ಕಾಲವೆಂದರೆ ಕೃತಯುಗವು ಮುಗಿದು ತ್ರೇತಾಯುಗವು ಬರಲಿತ್ತು. ಆದ್ದರಿಂದ ಈಶ್ವರ ಪ್ರೇರಣೆಯಿಂದ ರಾಜನ ಮನಸಿನಲ್ಲಿ ಋಗ್ವೇದ, ಯಜುರ್ವೇದ: ಸಾಮವೇದಗಳಲ್ಲಿ ಹೇಳಿರುವ ಯಜ್ಞಯಾಗಾದಿ ಕರ್ಮಗಳನ್ನು ಮಾಡಬೇಕೆಂದು ಬಂದಿತು. ರಾಜನು ಆ ಥಾಲಿಯನ್ನು ಇಟ್ಟ ಸ್ಥಳಕ್ಕೆ ಬಂದು ನೋಡಲು ಥಾಲಿಯ ಬದಲು ಅಶ್ವತ್ಥವೃಕ್ಷವೂ ಶಮಿವೃಕ್ಷವೂ ಇವೆ ಎಂದು ಕಂಡು ಬಂದಿತು. ಆ ನಂತರ ಅವನು ಆ ಅಶ್ವತ್ಥವೃಕ್ಷದ ಕಟ್ಟಿಗೆಯನ್ನು ತೆಗೆದುಕೊಂಡು ಎರಡು ಅರಣಿಗಳನ್ನು ಮಾಡಿ ಶಮಿಯ ವೃಕ್ಷದ ಕಟ್ಟಿಗೆಯೊಡನೆ ಮಂಥನಮಾಡಿದನು. ಕೆಳಗಿನ ಅರಣಿಯು ಉರ್ವಶಿಯೆಂದೂ, ಮೇಲಿನ ಅರಣಿಯು ತಾನೆಂದೂ ಭಾವಿಸಿ ಮಂಥನಮಾಡಲು ಅಲ್ಲಿ ಅಗ್ನಿಯುತ್ಪನ್ನವಾಯಿತು. ರಾಜನು ಆ ಅಗ್ನಿಯನ್ನು ತನ್ನ ಪುತ್ರನೆಂದು ಭಾವಿಸಿಕೊಂಡನು. ಉರ್ವಶಿಯ ಪ್ರಾಪ್ತಿಗಾಗಿ ಆ ಅಗ್ನಿಯಲ್ಲಿ ಹವನ ಮಾಡಿ ರಾಜನು ಗಂಧರ್ವಲೋಕಕ್ಕೆ ತೆರಳಿದನು. ಅಲ್ಲಿ ಉರ್ವಶಿಯ ಸಮಾಗಮ ಹೊಂದಿ ಅಕ್ಷಯ ಸುಖವನ್ನು ಅವನು ಭೋಗಿಸತೊಡಗಿದನು ಎಂದು ವರ್ಣಿಸಲಾಗಿದೆ.

ಮೇಲೆ ಬಂದ ಕಥೆಯ ಮೇಲಿಂದ ಯಜ್ಞಯಾಗಾದಿ ಕರ್ಮಮಾರ್ಗದ ಮುಖ್ಯ ಪ್ರವರ್ತಕನೆಂದರೆ ರಾಜಾಪುರೂರವನೇ ಎಂಬದು ಸ್ಪಷ್ಟವೇ ಇದೆ. ಪುರೂರವನ ಮೊದಲು ಕೃತಯುಗವಿತ್ತು. ಆ ಕೃತಯುಗದಲ್ಲಿ ಒಬ್ಬನೇ ದೇವರು ಮತ್ತು ಒಂದೇ ವೇದವು ಇತ್ತು. ಸರ್ವ ವಾಙ್ಮಯದ ಮೂಲವಾದ ಓಂಕಾರನೇ ಆ ಯುಗದ ವೇದವೆಂದು ಗಣಿಸಲ್ಪಟ್ಟಿತ್ತು. ಮನುಷ್ಯಮಾತ್ರರಲ್ಲಿ ಯಾವ ಜಾತಿಭೇದವೂ ಇರಲಿಲ್ಲ. ಸರ್ವ ಮನುಷ್ಯರೆಲ್ಲರೂ ಒಂದೇ ವರ್ಣದವರೆಂದು ತಿಳಿಯಲ್ಪಟ್ಟಿದ್ದರು. ಈಶ್ವರನನ್ನು ಆರಾಧಿಸುವವರು ಓಂಕಾರದ ಜಪವನ್ನು ಮಾಡಿ ಈಶ್ವರನ ಧ್ಯಾನಮಾಡುವದೇ ಆ ಕಾಲದಲ್ಲಿಯ ಪ್ರಘಾತವಾಗಿತ್ತು.

ಆದರೆ ಪುರೂರವನಿಂದಲೇ ಬೇರೆ ಹಾದಿ ಹಿಡಿಯಿತು. ಪುರೂರವನ ತರುವಾಯ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರವೆಂಬ ಚಾತುರ್ವರ್ಣ್ಯಗಳುಂಟಾದವು. ಋಗ್ವೇದ, ಯಜುರ್ವೇದ, ಸಾಮವೇದ ಎಂಬ ವೇದತ್ರಯಗಳಾದವು. ಈಶ್ವರನನ್ನು ಆರಾಧಿಸುವ ಮಾರ್ಗವೇ ಬದಲಾಯಿತು. ಧ್ಯಾನ

ಮಾರ್ಗದ ಪ್ರವೃತ್ತಿಯು ಬದಲಾಗಿ ರಾಜಸೂಯ, ವಾಜಪೇಯ, ಅಗ್ನಿಷ್ಟೋಮ ಮೊದಲಾದ ಯಜ್ಞಮಾಡುವ ಪ್ರಘಾತವುಂಟಾಯಿತು. ಪುರೂರವನು ಧಾರ್ಮಿಕ ಕಾರ್ಯಗಳಲ್ಲಿ ವಿಲಕ್ಷಣ ಕ್ರಾಂತಿಯನ್ನುಂಟುಮಾಡಿದನು. ಈ ಪುರೂರವನ ಚಾರಿತ್ರ್ಯದ ಮೇಲಿಂದ ನೋಡಿದರೆ ಐತಿಹಾಸಿಕ ಮಹತ್ವವು ಎಷ್ಟಿದೆ ಎಂಬದು ಕಂಡುಬರುವದು.

ಈ ನಾಟಕದ ಬಗ್ಗೆ ಶ್ರೀ. ಕೆ. ಎಸ್. ರಾಮಸ್ವಾಮಿ ಶಾಸ್ತ್ರಿ ಎಂಬವರು '........the tempestuous passion of the human king towards the celestial damsel takes on a human aspect and comes nearer to our minds and hearts in the fifth Act. Passion is linked to the graces and sanctities of domestic and national life, and benedictions of Indra and Narada introduce the element of divine approval which alone makes passion a purifying and uplifting force. Only then does passion which is born of mere love of beauty become a life-giving force. Only then does the humun king Pururavas attain true god likeness by the selfish and tranquil bliss of his affection into which passion has become sublimated and transmuted and transfigured, and only then a gracious humaness decends on the divine Urvasi' ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಕಾಲಿದಾಸನ ಜೀವನ ಚರಿತ್ರೆ, ಅವನ ಕೃತಿಗಳ ವಿಮರ್ಶೆ ಮೊದಲಾದವುಗಳನ್ನು ಇಲ್ಲಿ ಸೇರಿಸಬೇಕೆಂಬ ಇಚ್ಛೆ ಇತ್ತು. ಆದರೆ ಅವಕಾಶವಿರದ್ದರಿಂದ ಬಿಟ್ಟು ಕೊಡಬೇಕಾಯಿತು.

# ಇಲೆ ಮತ್ತು ಊರ್ವಶಿಯರ ಜನ್ಮ

## ಇಲೆ

ಈ ಇಲೆಯ ವಿಷಯವಾಗಿ ಪುರಾಣಗಳಲ್ಲಿ ಚಮತ್ಕಾರಕವಾದ ಕಥೆಯಿದೆ. ಇಲೆಯು ಮೂಲತಃ ಸ್ತ್ರೀಯಾಗಿರದೆ ಪುರುಷನಾಗಿದ್ದನು. ಸೂರ್ಯವಂಶದ ಆದ್ಯರಾಜನಾದ ವೈವಸ್ವತ ಮನುವಿನ ಚೊಚ್ಚಿಲ ಮಗನಾದ ಸುದ್ಯುಮ್ನನಿಗೆ ಸ್ತ್ರೀತ್ವವು ಪ್ರಾಪ್ತವಾದ್ದರಿಂದ ಅವನಿಗೆ ಈ 'ಇಲೆ' ಎಂಬ ಹೆಸರಾಯಿತು. ಅದು ಹೇಗೆಂದರೆ:—

ಸುದ್ಯುಮ್ನನು ತಾರುಣ್ಯಭರದಲ್ಲಿ ಬಂದಾಗ ಬೇಟೆಯನ್ನಾಡುತ್ತ ಅರಣ್ಯದಲ್ಲಿ ಸಂಚರಿಸುತ್ತಿದ್ದಾಗ ಜಂಬೂದ್ವೀಪದ ನವಖಂಡ ಪೃಥ್ವಿಯಲ್ಲೊಂದಾದ ಇಲಾವೃತ್ತ ಖಂಡವನ್ನು ಪ್ರವೇಶಿಸಿದನು. ಅಲ್ಲಿ ಪ್ರವೇಶಿಸುತ್ತಲೆ ಅವನು ಸ್ತ್ರೀಯಾದನು. ಅವನ ಕುದುರೆಯೂ ಹೆಣ್ಣು ಕುದುರೆಯಾಯಿತು. ಸೇವಕರು ಸ್ತ್ರೀಯಾದರು. ಈ ರೀತಿಯ ರೂಪವಿಪರ್ಯಾಸವಾಗುವದಕ್ಕೆ ಮಹಾದೇವನು ಮರ್ಯಾದೆ ಪಡಿಸಿದುದೇ ಕಾರಣವು. ಅಂದರೆ ಈ ಇಲಾವೃತ್ತ ಖಂಡದಲ್ಲಿ ಭಗವಾನ ಶಂಕರನು ಪಾರ್ವತಿಯೊಂದಿಗೆ ಯತೇಚ್ಛವಾಗಿ ಕ್ರೀಡಿಸುತ್ತಿದ್ದನು. ಒಂದು ದಿವಸ ಅವರಿಬ್ಬರೂ ಕ್ರೀಡಾಸಕ್ತರಾದಾಗ ಅಕಸ್ಮಾತ್ತಾಗಿ ಅಲ್ಲಿಗೆ ಸನತ್ಕುಮಾರಾದಿ ಋಷಿಗಳು ಶಂಕರನ ದರ್ಶನಾರ್ಥಿಗಳಾಗಿ ಆಗಮಿಸಿದರು. ಆ ಬ್ರಹ್ಮಚಾರಿಗಳನ್ನು ನೋಡಿ ಪಾರ್ವತಿಗೆ ಬಲು ನಾಚಿಕೆಯೆನಿಸಿತು. ಕೂಡಲೆ ಅವಳು ಈ ಪ್ರದೇಶದಲ್ಲಿ ಪ್ರವೇಶಿಸುವವರಿಗೆ ಸ್ತ್ರೀರೂಪ ಬರಲಿ ಎಂದು ಶಾಪವನ್ನಿತ್ತಳು. ಆದಕ್ಕೆ ಮಹಾದೇವನ ಅನುಮತಿಯೂ ದೊರಕಿತು.

ಈ ಸುದ್ಯುಮ್ನನಿಗೆ ಈ ಸಂಗತಿಯು ಗೊತ್ತಿರಲಿಲ್ಲ. ಆದಕಾರಣ ಅವನಿಗೆ ಸ್ತ್ರೀರೂಪವು ಬಂದಿತು. ಸ್ತ್ರೀಯಾದ ಕೂಡಲೆ ಅವನ ಮನೋಧರ್ಮಗಳೂ ಸ್ತ್ರೀಯಂತೆಯೇ ಆದವು. ಈ ಸಂಗತಿಯು ವೈವಸ್ವತನಿಗೆ ಅವನ

ಕುಲಪುರೋಹಿತರಾದ ವಸಿಷ್ಠರಿಂದ ತಿಳಿದುಬಂದಿತು. ಯಜಮಾನನ ಮಗನಿಗೆ ಸಲುವಾಗಿ ವಸಿಷ್ಠನು ಶಂಕರನ ಆರಾಧನೆ ಮಾಡಿ ಅವನನ್ನು ಪ್ರಸನ್ನೀಕರಿಸಿಕೊಂಡನು. ಆಗ ಮಹಾದೇವನು ತನ್ನ ವಚನವನ್ನು ಸುಳ್ಳುಮಾಡದಂತೆ ಸುದ್ಯುಮ್ನನು ಒಂದು ತಿಂಗಳ ಸ್ತ್ರೀಯಾಗಿಯೂ, ಒಂದು ತಿಂಗಳ ಪುರುಷನಾಗಿಯೂ ಇರುವಂತೆ ಉಶ್ಯಾಪವನ್ನಿತ್ತನು. ಈ ವ್ಯವಸ್ಥೆಯಿಂದ ಸುದ್ಯುಮ್ನನು ರಾಜ್ಯಗೆಯುತ್ತಿರುವಾಗ ಪ್ರಜೆರಿಗೆ ಸಂತೋಷವೆನಿಸಲಿಲ್ಲ. ಆದ್ದರಿಂದ ವೈವಸ್ವತಮನುವು ಇಕ್ಷ್ವಾಕು, ನೃಗ, ಶರ್ಯಾತಿ ಮೊದಲಾದ ಹತ್ತು ಪುತ್ರರನ್ನು ಉತ್ಪನ್ನಮಾಡಿ ಸರ್ವ ರಾಜ್ಯವನ್ನು ಇಕ್ಷ್ವಾಕುವಿಗೆ ಕೊಟ್ಟನು.

ಇತ್ತ ಸುದ್ಯುಮ್ನನಿಗೆ ಸ್ತ್ರೀತ್ವವು ಪ್ರಾಪ್ತವಾದ ಕಾಲದಲ್ಲಿ ಬುಧನ ಸಮಾಗಮವಾಯಿತು. ಆಗ ಇಲೆಯಿಂದ ಈ ಪುರೂರವನು ಉತ್ಪನ್ನನಾದನು. ಚಂದ್ರವಂಶದ ಮೂಲ ಪುರುಷನೇ ಪುರೂರವನಾದನು.

## ಉರ್ವಶೀ

ಉರ್ವಶಿಯ ಉತ್ಪತ್ತಿಯೂ ಚಮತ್ಕಾರವಿದೆ. ವಿಷ್ಣುವಿನ ೨೪ ಅವತಾರಗಳಲ್ಲಿ ನರ ಮತ್ತು ನಾರಾಯಣ ಋಷಿಗಳೂ ಅವತಾರಿಗಳೆಂದು ಗಣಿಸಲ್ಪಟ್ಟಿದ್ದಾರೆ. ಅವರು ಬದರಿಕಾಶ್ರಮದಲ್ಲಿದ್ದುಕೊಂಡು ಉಗ್ರತಪಶ್ಚರ್ಯವನ್ನು ಆರಂಭಿಸಿದರು. ಅವರು ತಮ್ಮ ತಪಶ್ಚರ್ಯದ ಪ್ರಭಾವದಿಂದ ತನ್ನ ಪದವನ್ನು ಎಲ್ಲಿ ಕಿತ್ತುಕೊಳ್ಳುವರೋ ಎಂದು ಬಗೆದು ಇಂದ್ರನು ಅವರಿಗೆ ವಿಘ್ನವನ್ನುಂಟು ಮಾಡಲು ಉತ್ತಮೋತ್ತಮ ಅಪ್ಸರೆಯರನ್ನು ಅಲ್ಲಿಗೆ ಕಳುಹಿದನು. ಇಂದ್ರನ ಅಪ್ಪಣೆಯಂತೆ ಆ ಅಪ್ಸರೆಯರು ಅವರನ್ನು ಕೆಡಿಸಲು ಬಹಳ ಪ್ರಯತ್ನ ಮಾಡಿದರು. ಆದರೆ ಎಲ್ಲವೂ ವ್ಯರ್ಥವಾದವು.

ಈ ಅಪ್ಸರೆಯರು ವ್ಯರ್ಥ ಶ್ರಮಪಡುತ್ತಿದ್ದಾರೆಂದು ಬಗೆದು ಇಂದ್ರನಿಗೆ ತನ್ನ ಹುಚ್ಚುತನವು ತಿಳಿದುಬರಲೆಂದು ನಾರಾಯಣ ಋಷಿಯು ತನ್ನ ತಪಶ್ಚರ್ಯೆಯ ಸಾಮರ್ಥ್ಯದಿಂದ ಈ ಉರ್ವಶಿಯನ್ನು ಉತ್ಪನ್ನಮಾಡಿ ಈಕೆಯನ್ನು ತೆಗೆದುಕೊಂಡು ಹೋಗಿರೆಂದು ಹೇಳಲು ಅವರು ಈ ಉರ್ವಶಿಯನ್ನು ಸ್ವರ್ಗಕ್ಕೆ ತೆಗೆದುಕೊಂಡು ಹೋದರು.

---

# ರಾಜಾ ಪುರೂರವ

## ೧

ಸೃಷ್ಟಿಕರ್ತನಾದ ಬ್ರಹ್ಮದೇವನು ನಾನಾ ಪ್ರಕಾರದ ಸೃಷ್ಟಿಯನ್ನು ಮಾಡಿದನು. ಅದರಂತೆ ಅವನು ತನ್ನ ಮಾನಸಿಕ ಸೃಷ್ಟಿಯಿಂದ ಚಂದ್ರನೆಂಬ ಪುತ್ರನನ್ನೂ ನಿರ್ಮಿಸಿದನು. ಅವನು ಬಹು ತೇಜಸ್ವಿಯೂ, ತನ್ನ ಅಮೃತಮಯ ಕಿರಣಗಳಿಂದ ಸಕಲರಿಗೂ ಆನಂದವನ್ನೀಯುವವನೂ, ವನಸ್ಪತಿ, ಔಷಧ ಮೊದಲಾದವುಗಳನ್ನು ಪೋಷಿಸುವವನೂ ಆಗಿರುವದನ್ನು ಕಂಡು, ಬ್ರಹ್ಮನು ಅವನನ್ನು ಬ್ರಾಹ್ಮಣ, ನಕ್ಷತ್ರ, ವನಸ್ಪತಿ, ಔಷಧ ಮುಂತಾದವುಗಳ ಪಾಲನಪೋಷಣ ಮಾಡುವ ರಾಜನನ್ನಾಗಿ ನಿಯಮಿಸಿದನು. ಅವನಿಗೆ ಪ್ರಭೆ ಎಂಬ ಹೆಂಡತಿಯಲ್ಲದೆ ಇಪ್ಪತ್ತೇಳು ನಕ್ಷತ್ರಗಳೂ ಅವನ ಹೆಂಡಂದಿರಾಗಿದ್ದರು. ಆದರೂ ಅವನು ಅತಿ ಕಾಮಿಯಾದ್ದರಿಂದ ಅವನಿಗೆ ಮನಃಶಾಂತಿಯೇ ಇರಲಿಲ್ಲ.

ಒಂದಾನೊಂದು ದಿವಸ ಚಂದ್ರನ ಮನೆಯಲ್ಲಿ ಯಾವುದೋ ಒಂದು ಉತ್ಸವದ ನಿಮಿತ್ತವಾಗಿ ಇಂದ್ರಾದಿ ದೇವತೆಗಳೂ, ಬೃಹಸ್ಪತಿ ಮೊದಲಾದ ಋಷಿಗಳೂ ತಮ್ಮ ತಮ್ಮ ಹೆಂಡಂದಿರೊಡನೆ ಆಗಮಿಸಿದ್ದರು. ಉತ್ಸವವು ಯಥಾಸಾಂಗವಾಗಿ ಜರುಗಿದ ನಂತರ ಬಂದವರೆಲ್ಲರೂ ತಂತಮ್ಮ ಬಳಗದೊಂದಿಗೆ ತಂತಮ್ಮ ನಿವಾಸಗಳಿಗೆ ತೆರಳಿದರು. ಆದರೆ ಬೃಹಸ್ಪತಿಯ ಹೆಂಡತಿಯಾದ ತಾರೆಯು ಮಾತ್ರ ತನ್ನ ಗಂಡನೊಂದಿಗೆ ತೆರಳದೆ ಏನೋ ಒಂದು ನೆವ

ಮುಂದೆ ಮಾಡಿಕೊಂಡು ಚಂದ್ರನ ಮನೆಯಲ್ಲಿಯೇ ಉಳಿದಳು. ಅವಳು ಉತ್ಸವದ ಸಮಯದಲ್ಲಿ ಅತ್ತಿತ್ತ ಸುಳಿದಾಡುತ್ತಿರುವಾಗ ಚಂದ್ರನ ದೃಷ್ಟಿಯು ಅವಳಲ್ಲಿ ನಟ್ಟುಹೋಯಿತು. ಆದ್ದರಿಂದ ಅವಳು ಚಂದ್ರನ ಸಾನ್ನಿಧ್ಯದಲ್ಲಿ ಎಷ್ಟೋ ದಿವಸ ವಾಸವಾದಳು.

ತಾರೆಯನ್ನು ಕಳುಹಿಕೊಡಲು ಚಂದ್ರನಿಗೆ ಅನೇಕಾನೇಕ ಬಿನ್ನಹಗಳು ಹೋದುವು. ಚಂದ್ರನು ಅವುಗಳನ್ನು ಲೆಕ್ಕಿಸಲೇ ಇಲ್ಲ. ಯಾಕೆಂದರೆ ಅವನು ಅವಳಲ್ಲಿ ತೀರ ಆಸಕ್ತನಾಗಿದ್ದನು. ಅವಳೂ ಚಂದ್ರನನ್ನು ಬಿಟ್ಟುಹೋಗುವ ಮನಸ್ಸು ಮಾಡಲಿಲ್ಲ. ಹೀಗಿರುತ್ತಿರುವಾಗ ಅವಳು ಗರ್ಭಿಣಿಯೂ ಆದಳು. ಆ ಮೂಲಕ ದೊಡ್ಡದೊಂದು ಸಂಗ್ರಾಮವೇ ಎದ್ದಿತು. ಆಗ ಬ್ರಹ್ಮದೇವನು ಮಧ್ಯಸ್ತಿಕೆ ನಡೆಯಿಸಿ, ತಾರೆಯನ್ನು ಅವಳ ಗಂಡನಾದ ಬೃಹಸ್ಪತಿಯ ಬಳಿಗೆ ಕಳಿಸಿದನು. ಆದರೆ ಚಂದ್ರನಿಂದ ಹುಟ್ಟಿದ ಮಗನನ್ನು ಬ್ರಹ್ಮದೇವನು ಚಂದ್ರನ ವಶಕ್ಕೆ ಕೊಡಿಸಿದನು.

ಆ ಮಗುವಿನ ಬುದ್ಧಿಮತ್ತೆಯನ್ನೂ, ಪ್ರೌಢ ಆಚರಣೆಯನ್ನೂ ಕಂಡು ಚಂದ್ರನು ಬ್ರಹ್ಮದೇವನ ಆಜ್ಞೆಯಂತೆ ಆ ಮಗುವಿಗೆ ಬುಧನೆಂದು ನಾಮಕರಣ ಮಾಡಿದನು. ಆ ಮಗುವು ದಿನದಿನಕ್ಕೆ ಬೆಳೆದು ದೊಡ್ಡವನಾಗಿ ತಂದೆಯಾದ ಚಂದ್ರನಿಗೆ ಆನಂದವನ್ನೀಯತೊಡಗಿದನು. ಬುಧನು ತಾರುಣ್ಯಾವಸ್ಥೆಗೆ ಬಂದಾಗ ಒಂದು ದಿವಸ ಅವನು ಮೇರುಪರ್ವತದ ಬದಿಯಲ್ಲಿ ಸಂಚರಿಸುತ್ತಿರುವಾಗ ಇಲಾ ಎಂಬ ಸುಸ್ವರೂಪದ ತರುಣಿಯೊಬ್ಬಳು ಅವನ ದೃಷ್ಟಿಗೆ ಬಿದ್ದಳು. ಅದರಿಂದ ಪರಸ್ಪರರಲ್ಲಿ ಅನುರಾಗವುಂಟಾಗಿ ಬುಧನು ಅವಳನ್ನು ಸ್ವೀಕರಿಸಿದನು. ಅವಳು ಗರ್ಭಿಣಿಯಾಗಿ, ದಿನದುಂಬಿದ ಮೇಲೆ ಗಂಡು ಮಗುವನ್ನು ಹೆತ್ತಳು. ಚಂದ್ರನು ಆ ಮಗುವಿನ ಜಾತಕರ್ಮಾದಿಗಳನ್ನು ಮಾಡಿಸಿ ಅದಕ್ಕೆ ಪುರೂರವ ಎಂದು ಹೆಸರಿಟ್ಟನು. ಚಂದ್ರ, ಬುಧರಿಬ್ಬರೂ ದೇವತೆಗಳಲ್ಲಿ ಗಣನೆಯಾದ್ದರಿಂದ ಅವರು ಸ್ವರ್ಗದಲ್ಲಿಯೇ ಇರಹತ್ತಿದರು. ಆದರೆ ಪುರೂರವನ ತಾಯಿಯಾದ ಇಲೆಯು ಮನುವಿನ ಸಂತತಿಯವಳಾದ್ದರಿಂದ ಅವನು ಮಾನವನೆಂದು ಗಣಿಸಲ್ಪಟ್ಟನು. ಅವನು ಪ್ರೌಢ ವಯಸ್ಕನಾದ ಮೇಲೆ ಭೂಲೋಕದಲ್ಲಿ ಪ್ರತಿಷ್ಠಾನ ( ಪೈಠಣ ) ವೆಂಬಲ್ಲಿ ತನ್ನ ರಾಜ್ಯವನ್ನು ಸ್ಥಾಪಿಸಿದನು.

ಪುರೂರವ ರಾಜನು ಬಹು ಪರಾಕ್ರಮಿಯಾಗಿದ್ದನಲ್ಲದೆ ಲೋಕ ಪ್ರಿಯನೂ ಆಗಿದ್ದನು. ಅವನು ಇಂದ್ರನಿಗೂ ಕೂಡ ನೆರವಾಗಿ ಎಷ್ಟೋ ಸಲ ದೈತ್ಯರೊಡನೆ ಹೋರಾಡಿ ಜಯಶೀಲನಾಗಿದ್ದನು. ಅವನು ಹಲವಾರು ಹೆಂಗು ಸರ ಕೈಹಿಡಿದಿದ್ದರೂ ಅವನಿಗೆ ಮನಃಶಾಂತಿಯೇ ಇರಲಿಲ್ಲ. ಅವನು ಎಷ್ಟು ಪರಾಕ್ರಮಿ ಎಂದು ಹೆಸರಾಗಿದ್ದನೋ ಅಷ್ಟೇ ಸ್ತ್ರೈಣನಾಗಿದ್ದುಕೊಂಡು ನಿತ್ಯ ಕೃತ್ಯಗಳನ್ನು ವೇಳೆಗೆ ಸರಿಯಾಗಿ ಮಾಡುವದನ್ನೆಂದೂ ಬಿಟ್ಟಿರಲಿಲ್ಲ.

ಒಂದು ದಿವಸ ಅವನು ಸೂರ್ಯನ ಪೂಜೆಗಾಗಿ ಸ್ವರ್ಗಲೋಕಕ್ಕೆ ಹೋಗಿ ಅಪ್ರತಿಹತವಾದ–ಗತಿ-ರಥಾರೂಢನಾಗಿ ಹೇಮಕೂಟ ಪರ್ವತದ ಮೇಲಿನಿಂದ ಹಾಯ್ದು ತನ್ನ ರಾಜಧಾನಿಯ ಕಡೆಗೆ ಬರುತ್ತಿದ್ದನು. ಆಗ ದಾರಿ ಯಲ್ಲಿ ಅಕಸ್ಮಾತ್ತಾಗಿ ' ಮಹಾರಾಜರೇ, ನಮ್ಮನ್ನು ರಕ್ಷಿಸಿರಿ. ನಾವು ಅನಾಥ ರಾಗಿದ್ದೇವೆ. ದೇವತೆಗಳ ಪಕ್ಷಪಾತಿಯೂ, ಆಕಾಶದಲ್ಲಿ ಗತಿ ಇದ್ದವರಾ ರಾದರೂ ನಮ್ಮನ್ನು ಕಾಪಾಡಿರಿ ' ಎಂಬ ಕೂಗು ಅವನ ಕಿವಿಯ ಮೇಲೆ ಬಿದ್ದಿತು.

ಅದನ್ನು ಕೇಳಿ ಪುರೂರವನು ತನ್ನ ರಥವನ್ನು ನಿಲ್ಲಿಸಿ ' ಯಾರವರು ? ಆಕ್ರೋಶ ಮಾಡಬೇಡಿರಿ. ಯಾರಿಂದ ನಿಮ್ಮನ್ನು ರಕ್ಷಿಸಬೇಕಾಗಿದೆ ಎಂಬು ದನ್ನು ಹೇಳಿರಿ ' ಎಂದು ವಿಚಾರಿಸಿದನು. ಈ ಮಾತನ್ನು ಕೇಳಿ ರಕ್ಷಣೆಗಾಗಿ ಬಾಯಿಬಿಡುತ್ತಿರುವ ಅಪ್ಸರೆಯರು ಮುಂದೆ ಬಂದು ' ದೈತ್ಯರ ಉಪಟಳದಿಂದ ನಮ್ಮನ್ನು ರಕ್ಷಿಸಬೇಕು ' ಎಂದು ಬಿನ್ನವಿಸಿಕೊಂಡರು.

' ದೈತ್ಯರ ಉಪಟಳವು ನಿಮಗೆ ಯಾವ ರೀತಿಯಿಂದ ಆಗುತ್ತಿದೆ ' ಎಂದು ಪುರೂರವನು ವಿಚಾರಿಸಿದನು.

' ಒಬ್ಬ ಮಹಾನುಭಾವನ ತಪಸ್ಸು ಹೆಚ್ಚಾಗುತ್ತಿರುವ ಸಂಶಯದಿಂದ ಇಂದ್ರನು ಆ ತಪಸ್ಸಿಗೆ ವಿಘ್ನವನ್ನುಂಟುಮಾಡಲು ಸುಕುಮಾರ ರೂಪದಿಂದ ಗರ್ವಿತಳಾದ ಶ್ರೀ ಗೌರಿಯ ಅಭಿಮಾನ ಪರಿಹಾರಕಳೂ, ಸ್ತ್ರೀಸೃಷ್ಟಿಯ ಕೇವಲ ಅಲಂಕಾರ ಸ್ವರೂಪಳೂ ಆದಂಥ ನಮ್ಮ ಸಖಿಯಾದ ಉರ್ವಶಿಯು ಕುಬೇರನ ಮನೆಯಿಂದ ತಿರುಗಿ ಹೋಗುತ್ತಿರುವಾಗ ದೈತ್ಯನೊಬ್ಬನು ಅವ ಳನ್ನೂ ಚಿತ್ರಲೇಖೆಯನ್ನೂ ಅರ್ಧ ದಾರಿಯಲ್ಲಿಯೇ ಅಪಹರಿಸಿಕೊಂಡು ಹೋದನು ' ಎಂದು ರಂಭೆಯು ಹೇಳಿದಳು.

ಈ ಸುದ್ದಿಯನ್ನು ಕೇಳಿ ರಾಜನಿಗೆ ವಿಪರೀತ ಕೋಪ ಬಂದು ' ಆ ದುಷ್ಟನು ಯಾವ ದಾರಿ ಹಿಡಿದು ಓಡಿದನೆಂಬುದು ಗೊತ್ತಿದೆಯೇ ' ಎಂದು ಅವಳನ್ನು ವಿಚಾರಿಸಿದನು.

' ಓಹೋ, ಗೊತ್ತಿದೆ. ಅವನು ಹೀಗೆ ಈಶಾನ್ಯದಿಕ್ಕಿಗೆ ಹೋದನು.'

' ಸ್ತ್ರೀಯರೇ, ನೀವು ಚಿಂತಿಸಬೇಡಿರಿ. ನಿಮ್ಮ ಪ್ರಿಯ ಸಖಿಯನ್ನು ಬಿಡಿಸಿಕೊಂಡು ಬರುವ ಯತ್ನವನ್ನು ನಾನು ಮಾಡುವೆನು.'

ಇದನ್ನು ಕೇಳಿ ಆ ಅಪ್ಸರೆಯು ' ಸೋಮವಂಶದಲ್ಲಿ ಉತ್ಪನ್ನರಾದ ನಿಮಗೆ ಹೀಗೆ ಮಾಡುವದು ಯಥಾಯೋಗ್ಯವೇ ಆಗಿದೆ ' ಎಂದು ಹೇಳಿದಳು.

' ಇರಲಿ, ನನ್ನ ದಾರಿಯನ್ನು ಕಾಯುತ್ತ ನೀವು ಇಲ್ಲೆಲ್ಲಿ ಕುಳಿತು ಕೊಳ್ಳುವಿರಿ ?' ಎಂಬ ರಾಜನ ಪ್ರಶ್ನೆಯನ್ನು ಕೇಳಿ ಆ ಅಪ್ಸರೆಯರು ಆ ಪರ್ವತದ ಒಂದು ಶಿಖರವನ್ನು ಬೊಟ್ಟುಮಾಡಿ ತೋರಿಸಿ, ಆ ಶಿಖರದ ಮೇಲೆ ಅವನ ದಾರಿಯನ್ನು ಕಾಯುತ್ತಿರುವೆವೆಂದು ಅವನಿಗೆ ಬಿನ್ನವಿಸಿಕೊಂಡರು.

ಇತ್ತ ರಾಜನು ಅವರ ನಿರೋಪ ತೆಗೆದುಕೊಂಡು ಸಾರಥಿಗೆ ಈಶಾನ್ಯ ದಿಕ್ಕಿಗೆ ರಥವನ್ನು ಅತಿ ತ್ವರೆಯಿಂದ ಸಾಗಿಸಲು ಹೇಳಿದನು. ರಥವು ಭರ ಭರಾಟೆಯಿಂದ ಸಾಗಿತು. ' ಇಂದ್ರನಿಗೆ ಅಪರಾಧ ಮಾಡಿದಂಥ ರಕ್ಕಸನನ್ನು ಹಿಡಿಯುವದರಲ್ಲಿ ಯಾವ ಆಶ್ಚರ್ಯವೂ ಇಲ್ಲ' ಎನ್ನುತ್ತ ರಾಜನು ಸಾರಥಿ ಯನ್ನು ಹುರಿದುಂಬಿಸುತ್ತ ಸಾಗಿದನು. ಇತ್ತ ಆ ಅಪ್ಸರೆಯರು ರಾಜನ ರಥದ ವೇಗವನ್ನು ನೋಡುತ್ತ ಕೆಲ ಸಮಯ ಕಳೆದರು. ರಾಜನು ದಾರಿ ಕಾಯಲು ಹೇಳಿದ ಸ್ಥಳಕ್ಕೆ ಕುತೂಹಲದಿಂದ ಮೆಲ್ಲನೆ ಹೋಗುತ್ತಿರುವಾಗ ಅವರಲ್ಲಿಯ ಸಹಜನ್ಯಾ ಎಂಬವಳು ' ಸಖಿಯರೇ, ಆ ರಾಜರ್ಷಿಯು ಬಲು ದೂರ ಸಾಗಿ ದನು. ನಾವಿಲ್ಲಿ ನಿಂತುಕೊಂಡು ಮಾಡುವದೇನಿದೆ ? ಆ ಸ್ಥಳಕ್ಕೆ ಬೇಗನೆ ಹೋಗೋಣ, ನಡೆಯಿರಿ ' ಎಂದು ಹೇಳಿದಳು.

' ಗೆಳತಿಯರೇ, ಹಾಗೆಯೇ ಮಾಡೋಣ ' ಎಂದು ಮೇನಕೆ ಅನ್ನಲಾಗಿ ಹೇಮಕೂಟದ ಶಿಖರದ ಮೇಲಿರುವ ಆ ಸಾಂಕೇತಿಕ ಸ್ಥಳದೆಡೆಗೆ ಅವರೆಲ್ಲರೂ ಸಾಗತೊಡಗಿದರು. ಆಗ ರಂಭೆಯು ತನ್ನ ಸಖಿಯರಿಗೆ ' ಈ ರಾಜರ್ಷಿಯು ನಮ್ಮ ಆಪತ್ತನ್ನು ದೂರಮಾಡಬಹುದೋ ?' ಎಂದು ಪ್ರಶ್ನೆ ಮಾಡಿದಳು.

‘ ಸಖಿಯೇ, ಈ ವಿಷಯದಲ್ಲಿ ಎಳ್ಳಷ್ಟೂ ಸಂಶಯ ತೆಗೆದುಕೊಳ್ಳ ಬಾರದು ’ ಎಂದು ಮೇನಕೆಯು ಹೇಳಿದಳು.

‘ ಅದೇನು ಹಾಗಲ್ಲ. ಆದರೆ ಆ ರಕ್ಕಸರು ದುರ್ಜಯರಿರುತ್ತಾರೆ ’ ಎಂದು ರಂಭೆಯು ಮಾತನಾಡಿದಳು.

‘ ಇದ್ದರೇನಾಯಿತು ? ಈ ರಾಜರ್ಷಿಯ ಮುಂದೆ ಅವನ ಆಟವೇನೂ ನಡೆಯಲಾರದು. ದೊಡ್ಡ ದೊಡ್ಡ ಯುದ್ಧದ ಪ್ರಸಂಗ ಬಿದ್ದಾಗ ಮಹೇಂದ್ರನೂ ಸಹ ಮೃತ್ಯುಲೋಕದಿಂದ ಈ ಅರಸನನ್ನು ಸತ್ಕಾರಪೂರ್ವಕ ವಾಗಿ ಕರೆಯಿಸಿಕೊಂಡು, ದೇವತೆಗಳಿಗೆ ಜಯವು ಪ್ರಾಪ್ತವಾಗಬೇಕೆಂದು ಇವನನ್ನೇ ಸೈನ್ಯದ ಮುಂಭಾಗಕ್ಕೆ ಕಳಿಸುತ್ತಾನೆ. ಅಷ್ಟು ಪರಾಕ್ರಮಿ ಇರು ತ್ತಾನೆ ’ ಎಂದು ಮೇನಕೆಯು ಮಾತನಾಡಿದಳು. ರಂಭೆಯು ‘ ಒಟ್ಟಿನಲ್ಲಿ ಇಂದಿವನು ವಿಜಯಿಯಾಗಿ ಬರಲಿ ’ ಎಂದು ತನ್ನ ಆಶೆಯನ್ನು ವ್ಯಕ್ತಪಡಿಸಿ ದಳು. ಮೇನಕೆಯು ಸುಮ್ಮನಿರದೆ ನಡುವೆಯೇ ಬಾಯಿ ಹಾಕಿ ‘ ಸಖಿಯರೇ, ಸ್ವಲ್ಪ ಸಮಾಧಾನ ತಾಳಿರಿ. ಚಂದ್ರನು ಕೊಟ್ಟಂಥ ಹರಿಣಧ್ವಜಾಂಕಿತವಾದ ರಥವೇ ಇವನದಲ್ಲವೇ ? ಬಹುತೇಕವಾಗಿ ಅವನು ವಿಜಯಶಾಲಿಯಾಗದೆ ತಿರುಗಿ ಬರಲಾರನು ’—ಎಂದೆನ್ನುತ್ತಿರುವಷ್ಟರಲ್ಲಿ ಪುರೂರವನ ರಥವು ಅವರ ಸಮೀಪಕ್ಕೆ ಬಂದೇ ಬಿಟ್ಟಿತು. ರಾಜನು ಒಂದು ಬದಿಗೆ ಉರ್ವಶಿಯನ್ನೂ, ಇನ್ನೊಂದು ಬದಿಗೆ ಚಿತ್ರಲೇಖೆಯನ್ನೂ ಕೂಡ್ರಿಸಿಕೊಂಡು, ತಾನು ಮಧ್ಯದಲ್ಲಿ ಕುಳಿತುಕೊಂಡಿದ್ದನು. ಚಿತ್ರಲೇಖೆಯು ಭಯಭೀತಳಾಗಿ ಕಣ್ಣು ಮುಚ್ಚಿ ದ್ದಳು. ಉರ್ವಶಿಗೆ ಎಚ್ಚರವೇ ಇರಲಿಲ್ಲ. ರಾಜನು ತನ್ನ ಬಲಗೈಯಿಂದ ಅವ ಳನ್ನು ಹಿಡಿದಿದ್ದನು.

ಸ್ವಲ್ಪ ಹೊತ್ತಾದ ಮೇಲೆ ಚಿತ್ರಲೇಖೆಯು ಮನಸ್ಸನ್ನು ಗಟ್ಟಿಮಾಡಿ, ಧೈರ್ಯವನ್ನು ತಂದುಕೊಂಡು ಕಣ್ಣು ತೆರೆದಳು. ಉರ್ವಶಿಯನ್ನು ಎಬ್ಬಿ ಸಲು ಯತ್ನಿಸಿದಳು. ಅವಳ ಮೈಮೇಲೆ ಕೈಯ್ಯಾಡಿಸುತ್ತ ‘ ಗೆಳತಿಯೇ, ಎಚ್ಚರಾಗು. ನೀನು ಹೀಗೆ ಕೂಡುವುದರಿಂದ ನನ್ನ ಜೀವವು ಹೆದರಿದೆ. ಬೇಗನೆ ಎಚ್ಚರಾಗು ’ ಎಂದು ಅಂಗಲಾಚಿ ಬೇಡಿಕೊಳ್ಳುತ್ತಿದ್ದಳು. ಪುರೂ ರವನೂ ಆಕೆಯನ್ನು ಎಬ್ಬಿಸಲು ಯತ್ನಿಸತೊಡಗಿದನು. ‘ ಸುಂದರೀ, ಸಾವಧ ಳಾಗು. ಎಲೆ ಅಂಜುಬುರುಕಿಯೇ, ರಕ್ಕಸನ ಹೆದರಿಕೆಯು ಇನ್ನಿಲ್ಲ. ಅದು

ಹೋಯಿತು. ಇಂದ್ರನ ಶಕ್ತಿಯು ಮೂರೂ ಲೋಕಗಳನ್ನೂ ರಕ್ಷಿಸುವಷ್ಟು ಸಮರ್ಥವಿದೆ. ಆದಕಾರಣ ರಾತ್ರಿಯು ತೀರಿದ ಮೇಲೆ ಕಮಲವು ಪ್ರಫುಲ್ಲಿತವಾಗುವದಿಲ್ಲವೇ ? ಅದರಂತೆ ನೀನಾದರೂ ದೊಡ್ಡ ದೊಡ್ಡ ಕಣ್ಣುಗಳನ್ನು ತೆರೆ ' ಎಂದು ಪುರೂರವನು ಅವಳಿಗೆ ಹೇಳಿದನು.

ಅವರಿಬ್ಬರೂ ಈ ಪರಿಯಿಂದ ಅವಳನ್ನು ಸಂತೈಸುತ್ತಿದ್ದರೂ ಉರ್ವಶಿಗೆ ಎಚ್ಚರವಾಗಲೇ ಇಲ್ಲ. ಮೇಲಿಂದ ಮೇಲೆ ಅವಳು ಶ್ವಾಸ ಬಿಡುತ್ತಿದ್ದುದರಿಂದ ಅವಳ ಜೀವವು ಇನ್ನೂ ಇದೆ ಎಂಬದನ್ನು ಮಾತ್ರ ತಿಳಿಸುತ್ತಿತ್ತು. ಅವಳ ಈ ಅವಸ್ಥೆಯನ್ನು ಕಂಡು ಸಹಿಸಲಾರದೆ ಚಿತ್ರಲೇಖೆಯು ' ಸಖಿಯೇ, ನೀನಿನ್ನೂ ಎಚ್ಚರವಾಗಲೊಲ್ಲೆ; ಇದಕ್ಕೇನೆನ್ನಬೇಕು? ಎಚ್ಚರಾಗು, ಕಣ್ಣು ತೆಗೆ ' ಎಂದು ಒಂದೇ ಸವನೆ ಉರ್ವಶಿಯನ್ನು ಅಲುಗಾಡಿಸುತ್ತಿದ್ದಳು. ಇದನ್ನು ಕಂಡು ರಾಜನು ' ಚಿತ್ರಲೇಖೆಯೇ, ನಿನ್ನ ಈ ಸಖಿಯು ಬಲು ಹೆದರಿದ್ದಾಳೆಂದು ತೋರುತ್ತದೆ. ಇಗೋ ನೋಡು, ಅವಳ ವಿಸ್ತೃತವಾದ ಸ್ತನಗಳ ನಡುವಿರುವ ಮಂದಾರ ಪುಷ್ಪಮಾಲೆಯು ಒಂದೇಸವನೆ ಸರಿದಾಡುತ್ತಿದೆ. ಅದರಿಂದ ಅವಳ ಎದೆಗೆ ನೋವಾಗಿರಬೇಕೆಂದು ಕಾಣುತ್ತದೆ ' ಎಂದನು.

ಚಿತ್ರಲೇಖೆಯು ಬಹು ಕಷ್ಟದಿಂದ ' ಉರ್ವಶಿಯೇ, ಇನ್ನಾದರೂ ಧೈರ್ಯವನ್ನು ತಂದುಕೋ. ಗಟ್ಟಿಮನಸುಮಾಡಿ ಎಚ್ಚರಾಗು. ನಿನ್ನ ಈ ಅವಸ್ಥೆಯನ್ನು ನೋಡಿದರೆ ನೀನು ಅಪ್ಸರೆಯಲ್ಲವೆಂದನಬೇಕಾಗುತ್ತದೆ ' ಎಂದಳು.

' ಚಿತ್ರಲೇಖೆಯೇ, ನಿನ್ನ ಸಖಿಯ ಎದೆಯು ಭಯದಿಂದ ಒಡೆದು ಸೀಳಾಗಿದೆ. ಕುಸುಮದಷ್ಟು ಕೋಮಲವಾಗಿರುವ ಅವಳ ಹೃದಯದಿಂದ ಆ ಅಂಜಿಕೆಯು ಇನ್ನೂ ಹೋಗಿಲ್ಲ. ಯಾಕೆಂದರೆ ಅವಳ ಎದೆಯು ಒಂದೇಸವನೆ ಬಡಿದುಕೊಳ್ಳುತ್ತಿರುವದರಿಂದ ಸೆರಗು ಅತ್ತಿತ್ತ ಸರಿದಾಡುತ್ತಿದೆ '— ಎಂದು ರಾಜನೆಂದನು.

ಈ ರೀತಿಯಾಗಿ ರಾಜ ಮತ್ತು ಚಿತ್ರಲೇಖೆಯರಿಬ್ಬರೂ ಅವಳಿನ್ನೂ ಸಾವಧಳಾಗಲಿಲ್ಲೆಂದು ಬಹಳ ಚಿಂತೆಪಡುತ್ತಿರುವಾಗ ಉರ್ವಶಿಯು ಕಣ್ಣು ತೆರೆದಳು. ಕೈಕಾಲು ಎಳೆದುಕೊಳ್ಳಹತ್ತಿದಳು. ಉರ್ವಶಿಯು ಎಚ್ಚರಾದುದನ್ನು ಕಂಡು ರಾಜನು ' ಚಿತ್ರಲೇಖೆಯೇ, ನಿನ್ನ ಇಚ್ಛೆಯು ಫಲಿಸಿತು. ನಿನ್ನ

ಸಖಿಯು ಎಚ್ಚರವಾದಳು. ನೋಡು ! ಚಂದ್ರನು ಉದಯವಾದನೆಂದರೆ ರಾತ್ರಿಯ ಕತ್ತಲೆಯು ಮಾಯವಾಗುವಂತೆ, ಇಲ್ಲವೆ ಹೊಗೆಯು ಇಲ್ಲದಾದಾಗ ಹೊಳೆಯುವ ಬೆಂಕಿಯಂತೆ ಈ ಸುಂದರಿಯು ಭಯಭೀತಿಯಿಂದ ದೂರವಾಗಿ ದ್ದಾಳೆ' ಎಂದು ಹೇಳಿದನು.

ರಾಜನಿಗೆ ಅವಳ ಪರಿಚಯವು ಈ ಮೊದಲು ಇದ್ದಿಲ್ಲವಾದರೂ ಅವ ಳೊಬ್ಬ ಸಾಮಾನ್ಯ ಸ್ತ್ರೀಯಾದ್ದರಿಂದ ರಾಜನು ಅವಳ ಗುಣಗಾನವನ್ನು ಮಾಡ ತೊಡಗಿದನು. ಅದನ್ನು ಕಂಡು ಉರ್ವಶಿಯು ಸಂಕೋಚಪಟ್ಟುಕೊಳ್ಳಬಹು ದೆಂದು ಭಾವಿಸಿ ಚಿತ್ರಲೇಖೆಯು 'ಉರ್ವಶೀ, ಇನ್ನು ಸ್ವಸ್ಥಳಾಗಿರು. ಸಂಕಟ ದಲ್ಲಿ ಸಿಕ್ಕಿದ ನಿನ್ನನ್ನು ಈ ರಾಜನು ಪಾರುಮಾಡಿದ್ದಾನೆ. ಆ ರಕ್ಕಸನನ್ನು ಪರಾ ಭವಗೊಳಿಸಿ ನಿನ್ನನ್ನು ಬಿಡಿಸಿಕೊಂಡು ಬಂದಿದ್ದಾನೆ' ಎಂದಳು.

ಇದನ್ನು ಕೇಳಿ ಉರ್ವಶಿಯು ರಾಜನ ಕಡೆಗೆ ನೋಡಿ 'ಚಿತ್ರಲೇಖೆಯೇ, ತನ್ನ ಸಾಮರ್ಥ್ಯವನ್ನು ಪ್ರದರ್ಶಿಸುವಂಥ ಪ್ರತಾಪಿಯಾದ ಮಹೇಂದ್ರನು ಈ ಸಂದರ್ಭದಲ್ಲಿ ನನ್ನನ್ನು ರಕ್ಷಿಸಿದನೇ ?' ಎಂದು ವಿಚಾರಿಸಿದಳು.

'ನಿನ್ನನ್ನು ರಕ್ಷಿಸಿದವನು ಮಹೇಂದ್ರನಲ್ಲದಿದ್ದರೂ ಮಹೇಂದ್ರನಷ್ಟೇ ಮಹಾ ಪರಾಕ್ರಮಶಾಲಿಯಾದ ಈ ರಾಜರ್ಷಿ ಪುರೂರವನು ನಿನ್ನನ್ನು ರಕ್ಷಿ ಸಿದನು.'

ಮನೋಹರವಾದ ರಾಜನ ರೂಪವನ್ನು ಕಂಡು ಮೋಹಿತಳಾದ ಉರ್ವ ಶಿಯು 'ಆ ನೀಚನಾದ ರಕ್ಕಸನು ನನ್ನನ್ನು ಹೊತ್ತುಕೊಂಡು ಹೋಗಿ ನನ್ನ ಮೇಲೆ ಬಹಳ ಉಪಕಾರ ಮಾಡಿದನು. ಇಲ್ಲದಿದ್ದರೆ ಈ ರಾಜರ್ಷಿಯ ದರ್ಶ ನವು ನನಗೆಲ್ಲಿ ಆಗುತ್ತಿತ್ತು' ಎಂದಳು.

ಉರ್ವಶಿಯು ರಾಜನನ್ನು ಕಂಡು ಮೋಹಿತಳಾದಂತೆ ರಾಜನೂ ಉರ್ವ ಶಿಯ ರೂಪಕ್ಕೆ ಮರುಳಾಗಿ ತನ್ನ ಮನಸ್ಸಿನಲ್ಲಿಯೇ ಹೀಗೆ ಅಂದು ಕೊಂಡನು. 'ನಾರಾಯಣ ಋಷಿಯನ್ನು ಮೋಹಗೊಳಿಸಲು ಪ್ರಯತ್ನ ಪಟ್ಟಂಥ ಎಲ್ಲ ಅಪ್ಸರೆಯರು ಈ ಋಷಿಯ ತೊಡೆಯಿಂದ ಉತ್ಪನ್ನಳಾದ ಈ ಉರ್ವಶಿಯನ್ನು ಕಂಡು ನಾಚಿಕೆಪಟ್ಟರೆಂದು ಹೇಳುವದು ಯಥಾ ಯೋಗ್ಯ ವಾಗಿದೆ. ಅಥವಾ ಈ ನಾರಾಯಣ ಋಷಿಯು ಇವಳನ್ನು ಹುಟ್ಟಿಸಿದನೆಂಬು ದರಲ್ಲಿ ನನಗೆ ತಥ್ಯಾಂಶವೇ ಕಾಣುವದಿಲ್ಲ. ಯಾಕೆಂದರೆ–ಈಕೆಯನ್ನು

ನಿರ್ಮಿಸುವದರಲ್ಲಿ ಆಲ್ಹಾದಕರವಾದ ಪ್ರಕಾಶವುಳ್ಳವನಾದ ಚಂದ್ರನೇ ಸ್ವತಃ ಬ್ರಹ್ಮದೇವನಾಗಿರಬೇಕು. ಅದರಂತೆಯೆ ಶೃಂಗಾರವೇ ಪ್ರಧಾನ ರಸವಾಗಿರುವಂಥ ಮದನ ಮತ್ತು ವಸಂತಮಾಸವು ಇವಳನ್ನು ಉತ್ಪನ್ನಮಾಡಲು ಬೇಕಾಗುವ ಪದಾರ್ಥಗಳಾಗಿರಬೇಕು. ಇಲ್ಲದಿದ್ದರೆ ಹಗಲಿರುಳೂ ವೇದಾಭ್ಯಾಸ ಮಾಡಿ ಜಡಬುದ್ಧಿಯಾಗಿರುವ, ವಿಷಯಸೇವನದ ಕೌತುಕವು ಯಾರ ಮನಸಿನಿಂದ ಹೋಗಿದೆಯೋ ಅಂಥ ವೃದ್ಧ ನಾರಾಯಣ ಋಷಿಯಿಂದ ಇಂಥ ಮನೋಹರ ಮೂರ್ತಿಯು ಹೇಗೆ ನಿರ್ಮಾಣವಾಯಿತು ? ' ಎಂದಂದುಕೊಂಡನು.

ಈ ಪ್ರಕಾರ ಉಭಯತರ ದೃಷ್ಟಾದೃಷ್ಟಿಯಾಗಿ ಒಬ್ಬರಿಗೊಬ್ಬರು ಮನಸೋತರು. ದೊಡ್ಡ ಸಂಕಟದಿಂದ ಬಿಡುಗಡೆ ಹೊಂದಿದ ಉರ್ವಶಿಯು ರಾಜನಿಗೆ ಉಪಕೃತಳಾಗಿದ್ದಳು. ಉರ್ವಶಿಯು ' ಚಿತ್ರಲೇಖೆಯೇ ನಮ್ಮ ಸಖಿಯರೆಲ್ಲ ಎಲ್ಲಿರುವರು ? ' ಎಂದು ಕೇಳಿದಳು.

' ಸಖಿಯೇ, ನನಗೇನು ಗೊತ್ತು ? ಅಭಯವನ್ನು ಕೊಡುವಂಥ ಈ ಮಹಾರಾಜನಿಗೆ ನಮ್ಮ ಸಖಿಯರೆಲ್ಲಿರಬಹುದೆಂಬದು ಗೊತ್ತಿದ್ದರೂ ಇರಬಹುದು ' ಎಂದು ಚಿತ್ರಲೇಖೆ ಎನ್ನಲಾಗಿ, ರಾಜನು ಉರ್ವಶಿಯ ಕಡೆಗೆ ಹೊರಳಿ ' ನಿನ್ನ ಸಖಿಯರು ಸಂಕಟದಲ್ಲಿ ಬಿದ್ದಿರುವರು. ನಿನ್ನ ವಿಯೋಗದಿಂದ ಅವರು ಹೌಹಾರಿಹೋಗಿದ್ದಾರೆ. ನಿನ್ನ ಬೆಟ್ಟಿಗಾಗಿ ಅವರು ಕಾತುರರಾಗಿದ್ದಾರೆ. ಹಾಗೆ ಅವರು ಉತ್ಸುಕರಾಗಿರಲು ಕಾರಣವೇನು ? ' ಎಂದನು.

ಹೆಂಗಸರು ಸಾಮಾನ್ಯವಾಗಿ ಮುಖಸ್ತುತಿಪ್ರಿಯರಾಗಿರುತ್ತಾರೆ. ಅದರಲ್ಲಂತೂ ರೂಪಗುಣಾದಿಗಳಿಂದ ಗರ್ವಿತರಾದ ವೇಶ್ಯೆಯರಿಗೆ ಅದು ತೀರ ಸೇರುತ್ತದೆ. ರಾಜನು ಸ್ತುತಿಸಿದುದನ್ನು ಕೇಳಿ, ಉರ್ವಶಿಗೆ ಬಲು ಹಿಗ್ಗಾಯಿತು. ಅವಳು ರಾಜನನ್ನು ಉದ್ದೇಶಿಸಿ ತನ್ನ ಮನಸಿನಲ್ಲಿಯೇ ' ನಿನ್ನ ಭಾಷಣವು ಅಮೃತಮಯವಾಗಿದೆ. ಅಥವಾ ಚಂದ್ರನಿಂದ ಅಮೃತವು ಹೊರಟರೆ ಆಶ್ಚರ್ಯವೇನಿದೆ ? ಆದ್ದರಿಂದಲೇ ನನ್ನ ಮನಸು ಅವನ ಕಡೆಗೆ ಹರಿಯುತ್ತದೆ ' ಎಂದಂದುಕೊಂಡಳು.

ಇಷ್ಟರಲ್ಲಿ ಅವಳ ಗೆಳತಿಯರು ಹೇಮಕೂಟ ಪರ್ವತದ ಶಿಖರದ ಮೇಲೆ ನಿಂತುಕೊಂಡದ್ದು ಅವಳಿಗೆ ಕಾಣಿಸಿತು. ಆಗ ರಾಜನು ಅವರೆಡೆಗೆ

ಬಿಟ್ಟುಮಾಡಿ ' ಸುತನುಳಾದ ಉರ್ವಶಿಯೇ, ಅಲ್ಲಿ ಶಿಖರದ ಮೇಲೆ ಕಾಣಿಸುವ ನಿನ್ನ ಸಖಿಯರು ರಾಹುವಿನಿಂದ ಮುಕ್ತನಾದ ಚಂದ್ರನಂತೆ ನಿನ್ನ ಮುಖಾವಲೋಕನಕ್ಕಾಗಿ ಕುತೂಹಲದ ಕಣ್ಣಿನಿಂದ ನೋಡಲು ತವಕಪಡುತ್ತಾರೆ ' ಎಂದು ಹೇಳಿದನು. ಅದನ್ನು ಕೇಳಿಕೊಂಡು ಉರ್ವಶಿಯು ತನ್ನ ಸಖಿಯರ ಕಡೆಗೆ ನೋಡತೊಡಗಿದಳು. ಆಗ ಚಿತ್ರಲೇಖೆಯು ' ಏನು ನೋಡುತ್ತಿರುವೆ ಉರ್ವಶಿ ? ' ಎಂದು ವಿಚಾರಿಸಿದಳು.

' ಸಮ ದುಃಖಸುಖಿಗಳಾದ ಕಣ್ಣುಗಳಿಂದ ಪ್ರಾಶನಮಾಡುತ್ತೇನೆ. '

' ಯಾರನ್ನು ನೋಡುತ್ತಿರುವೆ ? ಏನು ಪ್ರಾಶನಮಾಡುತ್ತಿರುವೆ ? '

'....ಇಲ್ಲ–ಇಲ್ಲ. ನಾನು ಪ್ರಣಯೀ ಜನರನ್ನು ನೋಡುತ್ತೇನೆ. '

ಇತ್ತ ರಂಭೆಯು ಹೇಮಕೂಟ ಶಿಖರದ ಮೇಲೆ ಆಗಮಿಸಿದ ರಾಜನನ್ನು ಕಂಡು ಹರುಷಿತಳಾಗಿ ' ಚಿತ್ರಲೇಖೆಯೂ ನಮ್ಮ ಸಖಿಯಾದ ಉರ್ವಶಿಯೂ, ವಿಶಾಖೆ ಸಹಿತ ಭಗವಾನ್ ಚಂದ್ರನಂತೆ ಕಾಣುವ ರಾಜರ್ಷಿಯೂ ಬಂದಿದ್ದಾನೆ ' ಎಂದಳು.

ಮೇನಕೆಯು ಅತ್ತಕಡೆಗೆ ಕಣ್ಣು ಹೊರಳಿಸಿ ' ಈ ಸಮಯದಲ್ಲಿ ನಮಗೆ ಪ್ರಿಯವಾದ ಎರಡು ಸುದ್ದಿಗಳು ಪ್ರಾಪ್ತವಾದವು. ನಮ್ಮ ಪ್ರಿಯ ಸಖಿಯಾದ ಉರ್ವಶಿಯು ಮರಳಿದಳು. ಮತ್ತು ರಾಜರ್ಷಿಗೆ ಯಾವ ಗಾಯಗಳೂ ಆಗಿಲ್ಲ. ಅಂದಮೇಲೆ ಬಹಳೇ ಒಳ್ಳೆಯದಾಯಿತು ' ಎಂದು ಮಾತನಾಡಿದಳು.

ಸಹಜನ್ಯೆಯು ' ಸಖಿಯೇ, ಚೆನ್ನಾಗಿ ಮಾತನಾಡಿದಿ. ಆ ದೈತ್ಯರು ದುರ್ಜಯರಿರುತ್ತಾರೆ ' ಎಂದಳು.

ಉರ್ವಶಿಯ ಸಖಿಯರು ದಾರಿಕಾಯುತ್ತ ನಿಂತ ಸ್ಥಳದ ಹತ್ತಿರ ರಥವು ಬಂದಿತೆನ್ನುವದನ್ನು ರಾಜನು ಕಂಡು ' ಸಾರಥಿಯೇ, ಇದೇ ಆ ಪರ್ವತದ ಶಿಖರವು. ಇಲ್ಲಿಗೆ ರಥವನ್ನು ಕೆಳಗಿಳಿಸು ' ಎಂದು ಹೇಳಿದನು. ಸಾರಥಿಯು ಅದರಂತೆ ರಥವನ್ನು ಕೂಡಲೇ ಇಳಿಸಿಬಿಟ್ಟನು. ಆಕಾಶದಿಂದ ರಥವು ಬಲು ವೇಗದಿಂದ ಕೆಳಗಿಳಿಯುತ್ತಿರುವಾಗ ಉರ್ವಶಿಯು ಗಾಬರಿಗೊಂಡು ರಾಜನಿಗೆ ಅಪ್ಪಿಮುಟ್ಟಿ ಹಾಕಿದಳು. ಅವಳ ಆ ಸ್ಪರ್ಶಸುಖಾನುಭವವನ್ನುಂಡ ರಾಜನು ತನ್ನ ಮನಸ್ಸಿನಲ್ಲಿಯೇ " ನಾನಿಷ್ಟು ದಿನಗಳ ವರೆಗೆ ಭೋಗಿಸಿದ

ವಿಷಯೋಪಭೋಗದ ಫಲವು ಇಂದೆನಗಾಯಿತು. ರಥದ ವೇಗದ ನಿಮಿತ್ತವಾಗಿ ಬೆದರಿದ ಈ ಹರಿಣಾಕ್ಷಿಯ ಅಂಗಸ್ಪರ್ಶದಿಂದ ಉಂಟಾದ ರೋಮಾಂಚಗಳಿಂದ ಪ್ರತ್ಯಕ್ಷ ಕಾಮದೇವನೇ ನನ್ನ ದೇಹದಲ್ಲಿ ಪ್ರವೇಶವಾದಂತಾಗಿದೆ " ಎಂದುಕೊಂಡನು. ಅಷ್ಟರಲ್ಲಿ ರಥವು ಭೂಮಿಗಿಳಿಯಿತು. ಆಗ ಉರ್ವಶಿಯು ' ಚಿತ್ರಲೇಖೆಯೇ, ಆ ಕಡೆಗೆ ಸ್ವಲ್ಪ ಸರಿ ' ಎಂದಳು.

ಚಿತ್ರಲೇಖೆಯು ' ಆ ಕಡೆಗೆ ಸರಿಯಲು ನಾನು ಅಸಮರ್ಥಳಾಗಿದ್ದೇನೆ ' ಎಂದಳು. ರಥವು ಭೂಮಿಗಿಳಿದುದನ್ನು ಕಂಡು ರಂಭೆಯೇ ಮೊದಲಾದ ಸಖಿಯರೆಲ್ಲರು ತಮ್ಮತಮ್ಮೊಳಗೆ ' ನಮಗೆ ಒಳ್ಳೆಯದನ್ನು ಮಾಡಿಕೊಟ್ಟಂಥ ರಾಜರ್ಷಿಯ ದರ್ಶನವನ್ನು ತೆಗೆದುಕೊಂಡು, ಅವನಿಗೆ ಸತ್ಕಾರವನ್ನು ಮಾಡುವಾ ನಡೆಯಿರಿ ' ಎಂದಂದುಕೊಂಡು ರಥದ ಸಮೀಪಕ್ಕೆ ಅವರೆಲ್ಲರೂ ಬಂದುಬಿಟ್ಟರು.

ಅವರನ್ನು ಕಂಡು ರಾಜನು ' ಸಾರಥಿಯೇ, ರಥವನ್ನು ಇಲ್ಲಿಯೇ ನಿಲ್ಲಿಸು. ಋತುಕಾಲದಲ್ಲಿ ಶೋಭಿಸುವ ಬಳ್ಳಿಯಂತೆ ಸಮಾಗಮದ ಇಚ್ಛೆಯುಳ್ಳ ಸಖಿಯರು ಈ ಸುಂದರಿಯ ಸಮಾಗಮ ಹೊಂದುವ ವರೆಗೆ ರಥವನ್ನು ಇಲ್ಲಿಂದ ಹೊಡೆಯಬೇಡ ' ಎಂದು ಆಜ್ಞೆ ಮಾಡಿದನು. ಅದರಂತೆ ರಥವು ಸ್ತಬ್ಧವಾಗಿ ನಿಂತಿತು. ಆಗ ಆ ಅಪ್ಸರೆಯರೆಲ್ಲರು ಆ ರಾಜನ ಸುತ್ತ ಹತ್ತಂಬಾಳ ಕಟ್ಟಿ ಬಹು ಉಪಕೃತ ಬುದ್ಧಿಯಿಂದ ' ಸುದೈವದಿಂದ ಮಹಾರಾಜರು ವಿಜಯಶಾಲಿಯಾಗಿ ಬಂದಕಾರಣ ನಮಗೆ ಬಹಳ ಕೌತುಕವಾಗಿದೆ' ಎಂದರು.

ರಾಜನು ' ನೀವಾದರೂ ನಿಮ್ಮ ಗೆಳತಿಯ ಸಮಾಗಮದಿಂದ ಸುಖಿಗಳಾದುದನ್ನು ಕಂಡು ನನಗೆ ಸಂತೋಷವಾಗಿದೆ ' ಎಂದನು.

ಅಷ್ಟರಲ್ಲಿ ಚಿತ್ರಲೇಖೆಯು ಉರ್ವಶಿಯ ಕೈಯನ್ನು ಹಿಡಿದು ರಥದಿಂದ ಕೆಳಗಿಳಿಸಿಕೊಂಡಳು. ಆಗ ಅವಳು ತನ್ನ ಎಲ್ಲ ಸಖಿಯರಿಗೆ ' ನನ್ನನ್ನು ಗಟ್ಟಿಯಾಗಿ ಅಪ್ಪಿಕೊಳ್ಳಿರಿ. ನಿಮ್ಮ ಭೆಟ್ಟಿಯು ನನಗೆ ಪುನಃ ಆಗಲಾರದೆಂದು ನನಗೆನಿಸಿತ್ತು ' ಎನ್ನಲಾಗಿ, ಅವರೆಲ್ಲರೂ ಆಕೆಯನ್ನು ಗಟ್ಟಿಯಾಗಿ ಆಲಿಂಗಿಸಿಕೊಂಡರು. ಮೇನಕೆಯು ಅವರೆಲ್ಲರ ಪರವಾಗಿ ರಾಜನನ್ನು ಅಭಿನಂದಿಸುವ

ಉದ್ದೇಶದಿಂದ ' ನೂರು ವರ್ಷಗಳ ವರೆಗೆ ರಾಜನು ಸರ್ವ ಪೃಥ್ವಿಯ ರಾಜ್ಯ ಪರಿಪಾಲನೆಯನ್ನು ಮಾಡಲಿ ' ಎಂದಳು.

ಅಷ್ಟರೊಳಗೆ ಪೂರ್ವದಿಕ್ಕಿನಲ್ಲಿ ಅತಿ ತ್ವರೆಯಿಂದ ಯಾರದೋ ರಥ ವೊಂದು ಬರುತ್ತಿರುವಂತೆ ಕಂಡುಬಂದಿತು. ಅದನ್ನು ನೋಡಿ ಸಾರಥಿಯು ' ಮಹಾರಾಜರೇ, ಆ ರಥವು ಇತ್ತಕಡೆಗೇ ಬರುವಂತಿದೆ, ನೋಡಿರಿ. ಅದು ಭೂಮಿಗಿಳಿದೇಬಿಟ್ಟಿತು. ಬಂಗಾರದ ಬಾಹುಭೂಷಣಗಳನ್ನು ಧರಿಸಿದ ವಿದ್ಯುಲ್ಲತೆಯಂತೆ ಪ್ರಕಾಶನಾದ ಪುರುಷನೊಬ್ಬನು ಆ ರಥದಿಂದಿಳಿದು ಇತ್ತ ಕಡೆಗೆ ಬರುತ್ತಿದ್ದಾನೆ ' ಎಂದು ನಿವೇದಿಸಿದನು. ಅದನ್ನು ಕೇಳಿ ಅವರೆಲ್ಲರೂ ಆ ಕಡೆಗೆ ದೃಷ್ಟಿಯನ್ನು ಬೀರಿದರು. ಆ ಪುರುಷನನ್ನು ನೋಡಿ ಅವರು ಚಿತ್ರರಥನೆಂಬ ಗಂಧರ್ವನು ಬರುತ್ತಿದ್ದಾನೆಂದು ಗುರುತುಹಿಡಿದರು.

ಉರ್ವಶಿಯು ಇಂದ್ರನ ಅತ್ಯಂತ ಪ್ರೀತಿಯ ಅಪ್ಸರೆಯಿದ್ದು ಅವಳನ್ನು ದೈತ್ಯನು ಹರಣಮಾಡಿದ್ದನು. ಅದರಿಂದ ಪ್ರತ್ಯಕ್ಷ ಇಂದ್ರನ ಉಪಮರ್ದವೇ ಆದಂತಾಗಿತ್ತು. ಅದರ ಸೇಡನ್ನು ತೀರಿಸಿ ಪುರೂರವನು ಉರ್ವಶಿಯನ್ನು ಪಾರುಮಾಡಿಕೊಂಡು ಬಂದಿದ್ದನು. ಈ ವರ್ತಮಾನವನ್ನು ಕೇಳಿ ಇಂದ್ರನು ತನ್ನ ಕೃತಜ್ಞತೆಯನ್ನು ಅರ್ಪಿಸುವದಕ್ಕಾಗಿ ಈ ಚಿತ್ರರಥ ಗಂಧರ್ವನನ್ನು ಬೇಕೆಂತಲೆ ರಾಜನ ಕಡೆಗೆ ಕಳಿಸಿಕೊಟ್ಟಿದ್ದನು. ಚಿತ್ರರಥನು ರಾಜನ ಹತ್ತಿರ ಬಂದು ಬಹುಮಾನಪೂರ್ವಕವಾಗಿ ' ಪ್ರತ್ಯಕ್ಷ ಇಂದ್ರನೇ ಆಭಾರಿಯಾಗು ವಂಥ ಪರಾಕ್ರಮವನ್ನು ತೋರಿಸಿದ್ದರಿಂದ ನಿಮ್ಮ ಉತ್ಕರ್ಷವಾಗುತ್ತಿರುವದು ಬಹಳ ಒಳಿತಾಯಿತು ' ಎಂದು ಬಿನ್ನವಿಸಿಕೊಂಡನು.

ಪುರೂರವ ರಾಜನು ಯುದ್ಧ ಮೊದಲಾದ ಕಾರ್ಯಗಳ ನಿಮಿತ್ತದಿಂದ ಅನೇಕ ಸಲ ಇಂದ್ರನ ಕಡೆಗೆ ಹೋಗಿದ್ದನಾದ್ದರಿಂದ ಈ ಚಿತ್ರರಥನ ಪರಿ ಚಯವು ಅವನಿಗಾಗಿತ್ತು. ಅದರಿಂದ ಅವರಿಬ್ಬರಲ್ಲಿ ಗಾಢವಾದ ಮೈತ್ರಿಯೂ ಬೆಳೆದುಬಂದಿತ್ತು. ಚಿತ್ರರಥನ ಹಿತವಚನಗಳನ್ನು ಕೇಳಿ ಪುರೂರವನು ರಥ ದಿಂದಿಳಿದು ಬಂದು ' ಪ್ರಿಯಮಿತ್ರನಿಗೆ ಸ್ವಾಗತವು ' ಎಂದೆಂದು ಅವನ ಕೈಯಲ್ಲಿ ತನ್ನ ಕೈಯನ್ನು ಹಾಕಿ ಹಸ್ತಾಂದೋಲನವನ್ನು ಮಾಡಿದನು.

ಚಿತ್ರರಥನು ' ಮಿತ್ರನಾದ ಪುರೂರವನೇ, ಕೇಶಿ ಎಂಬ ದೈತ್ಯನು ಉರ್ವಶಿಯನ್ನು ಹರಣಮಾಡಿಕೊಂಡು ಹೋದನೆಂಬ ಸುದ್ದಿಯನ್ನು ನಾರದರ

ಮುಖದಿಂದ ಕೇಳಿ, ಇಂದ್ರನು ಅವಳನ್ನು ಬಿಡಿಸಿಕೊಂಡು ಬರಲು ನಮ್ಮ ಗಂಧರ್ವರ ಸೈನ್ಯಕ್ಕೆ ಆಜ್ಞೆಮಾಡಿದನು. ನಾವು ಸರ್ವಸನ್ನಾಹದೊಂದಿಗೆ ಪ್ರಯಾಣ ಬೆಳೆಸಬೇಕೆಂಬುವಷ್ಟರಲ್ಲಿ ನೀನು ಆಕೆಯನ್ನು ಪಾರುಮಾಡಿ ಕೊಂಡು ಬಂದಿರುವಿ ಎಂಬ ವರ್ತಮಾನ ಹತ್ತಿತು. ಅದರಿಂದ ನಾವು ಪ್ರಯಾಣವನ್ನು ನಿಲ್ಲಿಸಿಬಿಟ್ಟು ನಾನೇ ನಿನ್ನ ಬೆಟ್ಟಿಗೆಂದು ಬಂದಿರುವೆನು. ನಿನ್ನ ಜಯದ ದ್ಯೋತಕವಾದ ಈ ಉರ್ವಶಿಯನ್ನು ಮುಂದೆಮಾಡಿಕೊಂಡು ಇಂದ್ರನ ದರ್ಶನಕ್ಕೆ ನಡೆ. ಉರ್ವಶಿಯ ರಕ್ಷಣೆಯನ್ನು ಮಾಡಿದ್ದರಿಂದ ನೀನು ಇಂದ್ರನ ಪ್ರೀತಿಗೆ ಪಾತ್ರನಾಗಿರುವಿ. ಈ ಪೂರ್ವದಲ್ಲಿ ನಾರಾಯಣ ಋಷಿಯು ಇಂದ್ರನಿಗೆ ಕಾಣಿಕೆಯಾಗಿ ಒಪ್ಪಿಸಿದ ಈ ಉರ್ವಶಿಯನ್ನು ದೈತ್ಯನ ಕೈಯಿಂದ ಬಿಡಿಸಿ ಪುನಃ ಇಂದ್ರನಿಗೆ ನೀನು ಒಪ್ಪಿಸಿದಂತಾಗಿದೆ ' ಎಂದನು.

ಇದನ್ನು ಆಲಿಸಿ ರಾಜನು ' ಮಿತ್ರಾ, ಹಾಗೆನ್ನಬೇಡ. ಇಂಥ ಪ್ರಸಂಗ ಗಳಲ್ಲಿ ಗೆಲ್ಲುವ ಪಕ್ಷವು ಇಂದ್ರನ ಪ್ರಭಾವಕ್ಕೆ ಒಳಗಾಗಿರುವದೇ ಕಾರಣವು. ಪರ್ವತದ ದೊಡ್ಡ ದೊಡ್ಡ ಗುಹೆಗಳನ್ನು ವ್ಯಾಪಿಸಿರುವ ಸಿಂಹದ ಗರ್ಜನದ ಪ್ರತಿಧ್ವನಿಯೇ ಗಜರಾಜನನ್ನು ಹೆದರಿಸಿಬಿಡುವದಿಲ್ಲವೇ ? ಈ ಪರಾಕ್ರಮ ವೆಲ್ಲವೂ ಇಂದ್ರನದೇ ' ಎಂದುಸುರಿದನು.

ರಾಜನ ವಿನಯಪೂರಿತ ಈ ಮಾತನ್ನು ಕೇಳಿ ಚಿತ್ರರಥನು ' ಈ ರೀತಿಯ ಭಾಷಣವು ನಿನ್ನಂಥವನಿಗೇ ಯೋಗ್ಯವಾದುದು. ಲೀನತೆ ಇರುವದು ಪರಾಕ್ರಮಿ ಮನುಷ್ಯನಿಗೆ ದೊಡ್ಡದೊಂದು ಅಲಂಕಾರವಾಗಿದೆ ' ಎಂದನು.

' ಗೆಳೆಯನಾದ ಚಿತ್ರರಥನೇ, ನಾನು ನನ್ನ ರಾಜಧಾನಿಗೆ ಹೋಗುವ ಅವಶ್ಯಕತೆಯಿದೆ. ಇಂದ್ರನ ದರ್ಶನವು ಈ ಸಮಯಕ್ಕೆ ಸಾಧ್ಯವಿಲ್ಲ. ಆದ ಕಾರಣ ನೀನೇ ನಿಮ್ಮ ಈ ಉರ್ವಶಿಯನ್ನು ಒಯ್ದು ಇಂದ್ರನಿಗೆ ಮುಟ್ಟಿಸು.'

' ನಿನ್ನ ಇಚ್ಛೆ ಇದ್ದಂತೆ ಆಗಲಿ. ನಾನೇ ಇವರನ್ನು ಕರೆದೊಯ್ಯುವೆನು. ಅಪ್ಸರೆಯರೇ, ಹೊರಡೋಣ ಸಿದ್ಧರಾಗಿರಿ ' ಎಂದು ಚಿತ್ರರಥನೆನ್ನಲಾಗಿ ಅವರು ಹೊರಡಲನುವಾದರು. ಉರ್ವಶಿಯು ಸಣ್ಣ ದನಿಯಲ್ಲಿ ' ಚಿತ್ರಲೇಖೆ, ನನಗೆ ಉಪಕಾರ ಮಾಡಿದಂಥ ಈ ರಾಜನ ನಿರೋಪ ತೆಗೆದುಕೊಳ್ಳುವದು ನನ್ನ ಜೀವದಸುತ್ತು ಬಂದಿದೆ. ಆದಕಾರಣ ನೀನೇ ನನ್ನ ಮುಖವಾಗಿ ಅನುಜ್ಞೆ ಯನ್ನು ಪಡೆಯಬೇಕು ' ಎಂದಳು.

ಉರ್ವಶಿಯು ಮಾತಿನ ಇಂಗಿತವರಿದ ಚಿತ್ರಲೇಖೆಯು ರಾಜನ ಬಳಿಗೆ ಬಂದು ನಮ್ರತೆಯಿಂದ ' ಮಹಾರಾಜರೇ, ಉರ್ವಶಿಯು ತಮ್ಮಲ್ಲಿ ವಿಜ್ಞಾಪನೆಯನ್ನು ಮಾಡಿಕೊಳ್ಳುವದೇನೆಂದರೆ—ತಾವು ಅಪ್ಪಣೆಕೊಡುವುದಾದರೆ ನನ್ನ ಸಖಿಯೆಂಬ ನಿಮ್ಮ ಕೀರ್ತಿಯನ್ನು ದೇವಲೋಕಕ್ಕೆ ತೆಗೆದುಕೊಂಡು ಹೋಗುವೆನು ' ಎಂದು ಬೇಡಿಕೊಂಡಳು.

ಉರ್ವಶಿಯು ವಿಯೋಗವನ್ನು ಎಷ್ಟೂ ಸಹಿಸದ ರಾಜನು ' ಹುಂ, ಹೋಗಿಬರ್ರಿ, ಪುನಃ ಬರ್ರಿ' ಎಂದು ಅನುಮತಿಯನ್ನಿತ್ತನು. ರಾಜನ ಅಪ್ಪಣೆಯಾದೊಡನೆಯೇ ಆ ಅಪ್ಸರೆಯರೆಲ್ಲರು ಆಕಾಶಕ್ಕೆ ತೆರಳಿದರು. ಆದರೆ ಉರ್ವಶಿಯ ಮನವು ರಾಜನಲ್ಲಿ ನಟ್ಟಿದ್ದರಿಂದ ಅವಳ ವೇಗವು ಕುಂಠಿತವಾದಂತಾಗಿ, ಒಂದು ಬಳ್ಳಿಯ ಟೊಂಗೆಗೆ ಅವಳ ಕೊರಳೊಳಗಿನ ಹಾರವು ಸಿಕ್ಕಿಕೊಂಡಿತು. ಆದ್ದರಿಂದ ಅವಳು ಪುನಃ ಕೆಳಗೆ ಬಂದು ' ಅಯ್ಯೋ ! ಈ ಬಳ್ಳಿಯಲ್ಲಿ ನನ್ನ ಹಾರವು ತೊಡಕಿಕೊಂಡಿದೆ. ಚಿತ್ರಲೇಖೆಯೇ, ಬಿಡಿಸಿಕೊಡಬಾರದೇನೇ ?' ಎಂದು ಅಂಗಲಾಚಿದಳು. ರಾಜನಲ್ಲಿ ಇವಳ ಮನಸ್ಸು ಬೆರೆತುಹೋದುದನ್ನು ಕಂಡ ಚಿತ್ರಲೇಖೆಯು ನಗುನಗುತ್ತ ' ಅಹಹಾ ! ಈ ಹಾರವು ಬಹಳ ಗಟ್ಟಿಯಾಗಿ ಸಿಕ್ಕಿಬಿದ್ದಿದೆ. ಇದನ್ನು ಬಿಡಿಸುವದು ಬಹಳ ಕಠಿಣವದೆ ' ಎಂದಳು. ಅವಳ ಮಾತಿನ ಅರ್ಥವನ್ನರಿತ ಉರ್ವಶಿಯು ' ಇಂಥ ಹೊತ್ತಿನಲ್ಲಿ ನಗೆಚೇಷ್ಟೆಯನ್ನು ಮಾಡಬಾರದು. ಬೇಗನೆ ಬಿಡಿಸಬಾರದೇ ?' ಎಂದು ಬೇಡಿಕೊಂಡಳು.

ಚಿತ್ರಲೇಖೆ ' ಸಖಿಯೇ, ನಿಜವಾಗಿಯೇ ಕಠಿಣವಿದೆ. ಆದರೂ ಏನಾದರೂ ಮಾಡಿ ಬಿಡಿಸುವೆನು ' ಎನ್ನಲಾಗಿ, ಅವಳ ಮಾತಿನ ಒಳದನಿಯನ್ನರಿತ ಉರ್ವಶಿಗೂ ನಗೆಯು ತಡೆಯದಾಗಿ ' ಈಗೇನು ಮಾತಾಡುವಿಯೋ ಅದರ ನೆನಪಿರಲಿ ' ಎಂದು ಮಾತನಾಡಿದಳು. ರಾಜನಿಗೆ ಅವಳು ಕಣ್ಮರೆಯಾಗುವದು ಬೇಡಾಗಿತ್ತು. ಅವಳ ಕೊರಳೊಳಗಿನ ಹಾರವು ಬಳ್ಳಿಯೊಳಗೆ ಸಿಕ್ಕಿಕೊಂಡದ್ದರಿಂದ ಅವಳ ಪುನರ್ದರ್ಶನವಾದುದೊಂದು ದೊಡ್ಡ ಲಾಭವೇ ಆಯಿತೆಂದು ಹಿಗ್ಗಿ, ರಾಜನು ಆ ಬಳ್ಳಿಯನ್ನುದ್ದೇಶಿಸಿ ತನ್ನ ಮನಸಿನಲ್ಲಿಯೇ ' ಏ ಬಳ್ಳಿಯೇ, ಅವಳು ಹೋಗುವುದಕ್ಕೆ ಸ್ವಲ್ಪಾದರೂ ವಿಲಂಬ ಮಾಡಿದುದಕ್ಕೆ ನಾನು ನಿನಗೆ ಉಪಕೃತನಾಗಿದ್ದೇನೆ. ನೀನು ಹಾಗೆ ಮಾಡಿದ್ದ

ರಿಂದಲೇ ನನಗೆ ಆ ವಿಶಾಲನಯನೆಯು ಪುನಃ ಕಣ್ಣಿಗೆ ಬಿದ್ದಳು' ಎಂದಂದು ಕೊಂಡನು ಇತ್ತ ಚಿತ್ರಲೇಖೆಯು ಬಳ್ಳಿಯಿಂದ ಆ ಹಾರವನ್ನು ಬಿಡಿಸಿಬಿಟ್ಟಳು. ಆದರೂ ಉರ್ವಶಿಯು ನಿಟ್ಟುಸಿರುಬಿಡುತ್ತ, ರಾಜನನ್ನು ದಿಟ್ಟಿಸಿ ನೋಡುತ್ತ, ತನ್ನ ಸಖಿಯರು ಮೇಲೆ ಹೇಗೆ ಹಾರಿ ಹೋಗುತ್ತಿರುವರೆಂಬದನ್ನು ನೋಡುತ್ತ ನಿಂತುಬಿಟ್ಟಳು.

ರಾಜನು ಕೇಶಿ ದೈತ್ಯನನ್ನು ಪರಾಭವಗೊಳಿಸಲು ವಾಯವ್ಯಾಸ್ತ್ರವನ್ನು ಬಿಟ್ಟಿದ್ದನು. ಆ ವಾಯವ್ಯಾಸ್ತ್ರವು ಆ ದೈತ್ಯನನ್ನು ನಾಶಗೊಳಿಸಿ, ತಿರುಗಿ ರಾಜನ ಬತ್ತಳಿಕೆಯಲ್ಲಿ ಸೇರಲು ಬಂದಿತು. ಅದನ್ನು ಕಂಡು ಸಾರಥಿಯು 'ಮಹಾ ರಾಜ, ಇಂದ್ರನಿಗೆ ಅಪರಾಧವನ್ನು ಮಾಡಿದಂಥ ದೈತ್ಯನನ್ನು ಕ್ಷಾರ ಸಮುದ್ರ ದಲ್ಲಿ ಚೆಲ್ಲಿಕೊಟ್ಟು, ಆ ವಾಯವ್ಯಾಸ್ತ್ರವು ಸರ್ಪವು ತನ್ನ ಬಿಲದಲ್ಲಿ ಹೊಗು ವಂತೆ ತಮ್ಮ ಬತ್ತಳಿಕೆಯನ್ನು ಸೇರಿದೆ' ಎಂದು ಶ್ರುತಪಡಿಸಿದನು.

ಅಪ್ಸರೆಯರು ಹೊರಟರು. ಇನ್ನು ಅಲ್ಲಿದ್ದು ಯಾವ ಪ್ರಯೋಜನವೂ ಇಲ್ಲೆಂದು ಭಾವಿಸಿ ರಾಜನು ರಥಾರೂಢನಾಗಿ ಹೊರಡಲು ಸಿದ್ಧನಾದನು. ಇತ್ತ ಆಕಾಶ ಮಾರ್ಗದಿಂದ ಹೊರಟ ಉರ್ವಶಿಯು ರಾಜನ ಕಡೆಗೆ ಆಶಾ ಭೂತ ದೃಷ್ಟಿಯನ್ನು ಬೀರುತ್ತ 'ನನಗೆ ಉಪಕಾರ ಮಾಡಿದ ಈ ರಾಜನ ದರ್ಶ ನವು ಪುನಃ ನನಗೆ ಆಗುವದೇ ?' ಎಂದಂದುಕೊಳ್ಳುತ್ತ ಗಂಧರ್ವನೊಡನೆ ಮುಂದೆ ಮುಂದೆ ಸಾಗಿದಳು. ರಾಜನು ಅವಳನ್ನೇ ನೋಡುತ್ತ ಎಷ್ಟೋ ಹೊತ್ತು ನಿಂತುಬಿಟ್ಟಿದ್ದನು. ಆಗ ಅವನು 'ಏನು ಚಮತ್ಕಾರವಿದೆಯೋ ಯಾರು ಬಲ್ಲರು ! ಈ ಮದನನು ದುರ್ಲಭವಾದ ವಸ್ತುಗಳಲ್ಲಿ ಅಭಿಲಾಷೆ ಯನ್ನು ಹುಟ್ಟಿಸುತ್ತಾನೆ. ಈ ಉರ್ವಶಿಯು ನನ್ನ ಮನಸ್ಸನ್ನು ಬಲತ್ಕಾರ ಪೂರ್ವಕವಾಗಿ ಸೆಳೆದುಕೊಂಡು ಆಕಾಶದಲ್ಲಿ ಹಾರಿಹೋದಳು. ರಾಜ ಹಂಸಿಯು ಯಾವುದರ ಕೊನೆಹರಿದು ಹೋಗಿದೆಯೋ ಅಂಥ ಕಮಲದ ಎಳೆ ಯನ್ನು ಹಿಡಿದು ಹೇಗೆ ಎಳೆದುಕೊಳ್ಳುತ್ತದೆಯೋ ಹಾಗೆ ಈ ಅಪ್ಸರೆಯು ನನ್ನ ಮನಸ್ಸನ್ನು ಎಳೆದುಕೊಳ್ಳುತ್ತಿದ್ದಾಳೆ' ಎಂದಂದುಕೊಂಡನು.

---

೨

ಉರ್ವಶಿಯ ರೂಪಗುಣಗಳಿಗೆ ಮನಸೋತ ರಾಜನು ಅವಳು ಸ್ವರ್ಗ ಲೋಕಕ್ಕೆ ತೆರಳಿದ್ದರಿಂದ ಉದಾಸೀನನಾಗಿ, ಉಪಾಯವಿಲ್ಲದೆ ತನ್ನ ನಗರಕ್ಕೆ ಆಗಮಿಸಿದನು. ಉರ್ವಶಿಯು ಅವನ ಮನವನ್ನು ಹರಣಮಾಡಿದ್ದರಿಂದ ಪುರೂರವನು ಅಸ್ವಸ್ಥನಾಗಿದ್ದನು. ಅವನಿಗೆ ಸದಾ ಸರ್ವಕಾಲವೂ ಅವಳದೇ ವೇಧ ಹಿಡಿದುಬಿಟ್ಟಿತ್ತು. ಪ್ರಧಾನಿ ಮೊದಲಾದವರ ಆಗ್ರಹದ ಮೂಲಕ ಅವನು ರಾಜಕಾರ್ಯವನ್ನು ನೋಡುತ್ತಿದ್ದರೂ ಅದರ ಕಡೆಗೆ ಅವನ ಲಕ್ಷವೇ ಇರಲಿಲ್ಲ. ಅವನ ಮೈ-ಮನಗಳೆರಡೂ ವ್ಯಗ್ರವಾಗಿದ್ದವು. ಉರ್ವಶಿಯ ವಿಷಯವಾಗಿ ತನ್ನ ಮನಸ್ಸಿನಲ್ಲುಂಟಾಗುತ್ತಿದ್ದ ಭಾವನೆಗಳನ್ನು ಬೇರೆಯವರ ಮುಂದೆ ಹೇಳಲು ನಾಚಿಕೆಪಟ್ಟುಕೊಳ್ಳುತ್ತಿದ್ದನು. ಮಾಣವಕನೆಂಬ ಬ್ರಾಹ್ಮಣನೊಬ್ಬನು ಅವನ ನರ್ಮಸಚಿವನಾಗಿದ್ದನು. ಅವನು ರಾಜನಿಗೆ ಈ ಅವಸ್ಥೆ ಬರಲು ಕಾರಣವೇನೆಂದು ವಿಚಾರಿಸಲಾಗಿ ರಾಜನು ಅವನಿಗೆ ಸಂಭವಿಸಿದ ಎಲ್ಲ ಸಂಗತಿಯನ್ನು ತಿಳಿಯಪಡಿಸಿದನು. ಮಾಣವಕನು ಅವನ ನಂಬಿಗೆಯ ಗೆಳೆಯನು. ಅವನಿಂದ ಯಾವ ಸಂಗತಿಗಳನ್ನು ಮುಚ್ಚಿಡುವ ಕಾರಣವಿರಲಿಲ್ಲ. ಆದಕಾರಣ ತನ್ನ ಮನಸ್ಸಿನಲ್ಲಿ ಕಟಿಯುತ್ತಿರುವ ಗುಹ್ಯ ಮಾತನ್ನು ರಾಜನು ಅವನಿಗೆ ತಿಳಿಸಿದನು.

ಮಾಣವಕನು ಹೇಳಿಕೇಳಿ ಭಟ್ಟನೇ ಇದ್ದು ವಿದೂಷಕನಾಗಿದ್ದನು. ರಾಜನು ಹೇಳಿದ ಮಾತು ಅವನ ತಲೆಯಲ್ಲಿ ಬಹಳ ಹೊತ್ತು ನಿಲ್ಲುತ್ತಿದ್ದಿಲ್ಲ. ಅವನು ಅರಮನೆಯಲ್ಲಿ ಅತ್ತಿತ್ತ ಅಡ್ಡಾಡುತ್ತ ತನ್ನಷ್ಟಕ್ಕೆ ತಾನೇ 'ಅಯ್ಯೋ! ಶ್ರಾದ್ಧದ ಕೂಳನ್ನು ಕಂಠಮಟ ತಿಂದು ಉಬ್ಬಿದಂತೆ ನನ್ನ ಅವಸ್ಥೆಯಾಗಿದೆ. ರಾಜನು ಹೇಳಿದ ಸುದ್ದಿಯಿಂದ ನನ್ನ ಹೊಟ್ಟೆಯು ಒಡೆಯುವಷ್ಟು ಉಬ್ಬಿದೆ. ಇಲ್ಲಿ ಸಾಕಷ್ಟು ಜನರು ಸೇರಿರುವರು. ನನ್ನ ನಾಲಗೆಯನ್ನು ಬಿಗಿಹಿಡಿಯುವದು ನನ್ನಿಂದ ಸಾಧ್ಯವಿಲ್ಲ. ದರಬಾರದಲ್ಲಿ ಕುಳಿತ ರಾಜನು ಇಲ್ಲಿಗೆ ಬರುವವರೆಗೆ ಇಲ್ಲಿ ಜನರ ಸಮ್ಮರ್ದವಾಗುವದಿಲ್ಲ. ಆದ್ದರಿಂದ ನಾನು ಈ ದೇವಾಲಯದ ಮೊಗಶಾಲೆಯಲ್ಲಿ ಕುಳಿತುಕೊಳ್ಳುವೆನು' ಎಂದಂದುಕೊಂಡನು.

ರಾಜನ ಚಿತ್ತವು ತಾಳದ ಮೇಲೆ ಇಲ್ಲೆಂಬದನ್ನು ಪಟ್ಟದ ರಾಣಿಯೂ ಕಾಶೀರಾಜನ ಮಗಳೂ ಆದ ವಸುಮತಿಯು ಯಾವಾಗಲೋ ಕಂಡು ಹಿಡಿದಿದ್ದಳು. ಅವಳು ರಾಜನನ್ನು ವಿಚಾರಿಸಿ ನೋಡಿದಳು; ಆದರೆ ಅಸ್ವಸ್ಥತೆಯ ಕಾರಣವನ್ನು ಅವಳಿಗೆ ಹೇಳುವಹಾಗಿರಲಿಲ್ಲವೆಂದು ರಾಜನು ಅವಳಿಗೆ ಹೇಳದೆ ಹಾಗೆಯೇ ಬಿಟ್ಟಿದ್ದನು.

ಗಂಡನ ಚಿತ್ತವು ಅಸ್ವಸ್ಥವಾದರೆ ಹೆಂಡತಿಗೆ ಚಿಂತೆಯುಂಟಾಗುವದು ಸಹಜವಿದೆ. ಅದರಲ್ಲಿ ಇವನು ರಾಜನು. ಮೇಲಾಗಿ ರಸಿಕ ಶಿಖಾಮಣಿಯು. ಅಶ್ವಸ್ಥವಾಗಲು ಅಂಥ ಬೇರೆ ಯಾವ ಕಾರಣಗಳೂ ಇರಲಿಲ್ಲ. ಆದ್ದರಿಂದ ವಸುಮತಿಗೆ ಬಲುಃ ಚಿಂತೆಯಾಗಿ ಯಾವಳೋ ಒಬ್ಬ ಸ್ತ್ರೀಯ ಮೇಲೆ ರಾಜನ ಮನವು ಆಸಕ್ತವಾಗಿರಲೇಬೇಕೆಂದು ಅವಳು ತರ್ಕ ಕಟ್ಟಿದಳು.

ನಿಪುಣಿಕೆ ಎಂಬವಳು ಪಟ್ಟದ ರಾಣಿಯ ಪ್ರೀತಿಯ ದಾಸಿಯಾಗಿದ್ದಳು. ರಾಜನ ಮನಸು ಯಾಕೆ ಅಸ್ವಸ್ಥವಾಗಿದೆ ಎಂಬುದರ ಕಾರಣವನ್ನು ಗೊತ್ತು ಹಚ್ಚುವ ಕೆಲಸವನ್ನು ರಾಣಿಯು ಅವಳಿಗೆ ಹೇಳಿದಳು. ಮಾಣವಕನು ರಾಜನ ವಿದೂಷಕನಾದ್ದರಿಂದ ಅವನಿಗೆ ಇದರ ಇಂಗಿತವು ಗೊತ್ತಿರಲು ಸಾಕೆಂದು ಅವನ ಕಡೆಗೆ ಹೋಗಲು ಆಕೆಗೆ ತಿಳಿಸಿದಳು. ಅವಳು ಅವನನ್ನು ಹುಡುಕುತ್ತ ಹುಡುಕುತ್ತ ಗುಡಿಯ ಕಡೆಗೆ ಬಂದಳು. “ ಮಂಗನ ಮುಸುಡಿಯ ಮಾಣವಕನನ್ನು ಎಲ್ಲಿ ಹುಡುಕಲಿ ! ನಾನು ಅವನಿಗೆ ಚೇಷ್ಟೆಯನ್ನು ಮಾಡುತ್ತಲೇ ಇರುವೆ. ಅವನು ನನ್ನೊಡನೆ ಮಾತನಾಡುವನೋ ಇಲ್ಲವೋ ಇದರ ನಿಯಮವಿಲ್ಲ. ಅವನ ಮನವನ್ನು ಒಲಿಸಿಕೊಂಡು ರಾಜನ ಅಸ್ವಸ್ಥತೆಯ ಕಾರಣವನ್ನು ಹೇಗೆ ಹೊರಗೆ ತೆಗೆಯಲಿ ? ಹುಲ್ಲುಕಡ್ಡಿಯ ಮೇಲೆ ಬಿದ್ದ ಔಷಧದ ಹನಿಯಂತೆ ಈ ಗುಟ್ಟು ಅವನ ಹೊಟೆಯಲ್ಲಿ ಬಹಳ ಹೊತ್ತು ಉಳಿಯಲಾರದು ’ ಎಂದಂದುಕೊಳ್ಳುತ್ತ ಅವನನ್ನು ಹುಡುಕುತ್ತ ದೇವಾಲಯಕ್ಕೆ ಬಂದಾಗ ಅಕಸ್ಮಾತ್ತಾಗಿ ಮಾಣವಕನು ಅವಳ ದೃಷ್ಟಿಗೆ ಬಿದ್ದನು. ನಿಪುಣಿಕೆಯು ಅವನನ್ನು ನೋಡಿ ‘ ಇವನು ಚಿತ್ರದಲ್ಲಿ ಮೂಡಿದ ಮಾತಾಡುವ ಮಂಗನಂತೆ ಕುಳಿತುಕೊಂಡಿದ್ದಾನೆ. ಅವನ ಹತ್ತಿರ ಹೋಗಿ ಸವಿಸವಿ ಮಾತುಗಳನ್ನಾಡಿ ಅವನನ್ನು ನನ್ನವನನ್ನಾಗಿ ಮೊದಲು ಮಾಡಿಕೊಳ್ಳಬೇಕು.’ ಎಂದು ಎಣಿಕೆ ಹಾಕುತ್ತ ಅವನಿಗೆ ನಮಸ್ಕರಿಸಿದಳು.

' ನಿನಗೆ ಕಲ್ಯಾಣವಾಗಲಿ '—ಎಂದು ಹರಕೆಯನ್ನಿತ್ತು ' ಈ ದುಷ್ಟ ಬಾಯ್ಬಡಿಕೆಯನ್ನು ಕಂಡು ರಾಜನ ಗುಟ್ಟು ಎಲ್ಲಿ ರಟ್ಟಾಗಿಬಿಡುತ್ತದೋ–ಎಂದೆನಿಸುತ್ತದೆ. ' ಎಂದು ತನ್ನ ಮನದಲ್ಲಂದುಕೊಂಡು 'ನಿಪುಣಿಕೆಯೇ, ರಾಣಿಯೊಂದಿಗೆ ಸಂಗೀತದಲ್ಲಿ ಮಗ್ನವಾಗುವದನ್ನು ಬಿಟ್ಟು ಈ ವೇಳೆಯಲ್ಲಿ ಯಾವ ಕಡೆಗೆ ಹೊರಟಿರುವಿ?' ಎಂದು ಮಾಣವಕನು ಅವಳನ್ನು ವಿಚಾರಿಸಿದನು.

' ರಾಣಿಯ ಆಜ್ಞಾನುಸಾರವಾಗಿಯೇ ನಾನು ನಿನ್ನ ಕಡೆಗೆ ಬಂದಿರುವೆನು. '

' ನಿನ್ನ ರಾಣಿಯು ಏನನ್ನು ಹೇಳಿ ಕಳುಹಿದ್ದಾಳೆ? '

' ರಾಣಿಯವರ ಮೇಲೆ ನೀನು ನಿರ್ದಯನಾಗಿರುವಿ ಎಂದು ಅವರಿಗೆ ಅಸಹ್ಯ ವೇದನೆಯಾಗಿದೆ; ಅವರು ಬಹಳ ದುಃಖಿತರಾಗಿದ್ದರೂ ನೀನು ಅವರ ಕಡೆಗೆ ಕಿವಿಯನ್ನೇ ಕೊಟ್ಟಿಲ್ಲವಂತೆ—ಎಂದಂದರು. '

' ನಿಪುಣಿಕೆಯೇ, ರಾಣಿಗೆ ಇಷ್ಟೊಂದು ದುಃಖವಾಗಲು ಕಾರಣವೇನಿದೆ? ನನ್ನ ಗೆಳೆಯ ರಾಜನೇನಾದರೂ ಅವರಿಗೆ ಅಪ್ರಿಯವನ್ನು ಮಾಡಿದ್ದಾನೆಯೆ ಹೇಗೆ? ಎಂದು ಅವಳನ್ನು ವಿಚಾರಿಸಿದನು

ಮಾಣವಕನು ಈ ರೀತಿಯಿಂದ ವಿಚಾರಿಸಿದ್ದರಲ್ಲಿಯೇ ಅವಳಿಗೊಂದು ಸುವರ್ಣ ಸಂಧಿಯೊದಗಿದಂತಾಯಿತು. ರಾಜನು ಉರ್ವಶಿಯ ಬಗ್ಗೆ ಉತ್ಕಂಠಿತನಾಗಿದ್ದರೂ ಅವನು ತನ್ನ ಮನಸಿನ ದುಗುಡವನ್ನು ಬೇರೆಯವರಿಗೆ ತಿಳಿಸಬಾರದೆಂದು ಬಲು ಜಾಗ್ರತೆ ವಹಿಸಿದ್ದನು. ಅವನು ಸ್ವಪ್ನದಲ್ಲಿಯೂ ಕೂಡ ಉರ್ವಶಿಯ ಹೆಸರು ತೆಗೆದುಕೊಂಡಿದ್ದಿಲ್ಲ. ಅಪ್ಪಿತಪ್ಪಿ ಅವಳ ಬಗ್ಗೆ ತನಗಿರುವ ಅನುರಾಗವನ್ನು ಯಾರ ಮುಂದೆಯೂ ಪ್ರಕಟಮಾಡಿರಲಿಲ್ಲ. ಆದರೂ ಧೂರ್ತಳಾದ ಈ ನಿಪುಣಿಕೆಯು ಮಾಣವಕನಿಂದ ಸತ್ಯ ಸಂಗತಿಯನ್ನು ತಿಳಿದುಕೊಳ್ಳಲು ಬೇಕಂತಲೇ ' ಮಹಾರಾಜರು ಬೇರಾವುದನ್ನೂ ಮಾಡಿಲ್ಲ; ಆದರೂ ಅವರು ಯಾವಳ ಬಗ್ಗೆ ಉತ್ಕಂಠಿತರಾಗಿರುವರೋ ಅವಳ ಹೆಸರಿನಿಂದ ರಾಣಿಯನ್ನು ಕರೆದರು' ಎಂದು ಸುಳ್ಳು ಮಾತನಾಡಿದಳು.

ಈ ಬಾಯ್ಬಡಿಕ ದಾಸಿಯ ಮಾತು ಸತ್ಯವಿರಬೇಕೆಂದು ಆ ಬಡ ಬ್ರಾಹ್ಮಣನಿಗೆನಿಸಿ ' ನನ್ನ ಗೆಳೆಯನು ತಾನಾಗಿಯೇ ಈ ಗುಪ್ತ ಸಂಗತಿಯನ್ನು ಹೊರಗೆಡವಿದ್ದಾನೆ. ಆದ್ದರಿಂದ ಬ್ರಾಹ್ಮಣನಾದ ನಾನು ನನ್ನ ನಾಲಗೆಯನ್ನು

ಬಿದ್ದಾಗಿನಿಂದ ಯಾರ ಪ್ರಹಾರವು ಎಂದೂ ವ್ಯರ್ಥವಾಗುವದಿಲ್ಲವೋ ಅಂಥ ಮದನನ ಬಾಣದ ಹೊಡೆತದಿಂದ ಬಿದ್ದ ಬಿರುಕಿನಿಂದ ಅವಳು ನನ್ನ ಹೃದಯವನ್ನು ಪ್ರವೇಶಿಸಿದ್ದಾಳೆ' ಎಂದಂದನು.

ರಾಜನ ಮಾತಿಗೆ ಉತ್ತರವೀಯದೆ ಮಾಣವಕನು 'ನಿಮ್ಮ ರಾಣಿಯಾದ ವಸುಮತಿಯು ನಿಜವಾಗಿಯೋ ಬಹಳ ದುಃಖಿತಳಾಗಿದ್ದಾಳೆ' ಎಂದು ಹೇಳಿದನು.

ಇದನ್ನು ಕೇಳಿ ರಾಜನು ಅವನಿಗೆ ಹೇಳಿದ ಮಾತನ್ನು ಅವನು ರಾಣಿಗೆ ತಿಳಿಸಿರಬೇಕೆಂದು ಭಾವಿಸಿಕೊಂಡು 'ನಿನ್ನ ಹತ್ತಿರ ಒಂದು ಗುಪ್ತ ಮಾತನ್ನು ಹೇಳಿದ್ದೆ. ಅದನ್ನು ರಟ್ಟು ಮಾಡದೆ ಇರುವಿಯಷ್ಟೇ?' ಎಂದು ವಿಚಾರಿಸಿದನು.

ಆಗ ಮಾಣವಕನು ಕಕ್ಕಾಬಿಕ್ಕಿಯಾಗಿ 'ಆ ನಿಪುಣಿಕೆಯು ನನ್ನನ್ನು ಮೋಸಗೊಳಿಸಿದಳು. ಇಲ್ಲದಿದ್ದರೆ ರಾಜನೇಕೆ ಹೀಗೆ ನನ್ನನ್ನು ವಿಚಾರಿಸುತ್ತಿದ್ದನು?' ಎಂದಂದುಕೊಳ್ಳುತ್ತ ಹಲ್ಲುಗಳಿಂದ ನಾಲಗೆಯನ್ನು ಕಚ್ಚಿ ಸುಮ್ಮನೆ ನಿಂತುಕೊಂಡನು. ಅದನ್ನು ನೋಡಿ ರಾಜನು 'ಸುಮ್ಮನೆ ಏಕೆ ನಿಂತಿರುವೆ? ನಾನು ಕೇಳಿದ ಪ್ರಶ್ನೆಗೆ ಉತ್ತರ ಕೊಡಬಾರದೆ?' ಎಂದು ಪುನಃ ವಿಚಾರಿಸಿದನು.

ಮಾಣವಕನು 'ನಾನು ನನ್ನ ನಾಲಗೆಯನ್ನು ಗಟ್ಟಿಯಾಗಿ ಹಿಡಿದಿರುವದರಿಂದ ನಿನಗೆ ಉತ್ತರವು ಸಿಗಲಾರದು' ಎಂದನು. ಅದನ್ನು ನೋಡಿ ರಾಜನು ಅವನು ಯಾರಿಗೂ ಹೇಳಿರಲಿಕ್ಕಿಲ್ಲೆಂದು ಭಾವಿಸಿ 'ಒಳ್ಳೇದು ಮಾಡಿದಿ; ಇನ್ನು ಮೇಲೆ ಯಾವ ಕರಮಣೂಕ ಮಾಡಿಕೊಂಡು ವೇಳೆಗಳೆಯೋಣ, ಹೇಳು' ಎಂದು ಕೇಳಿದನು.

ಮಾಣವಕನು ಹೊಟ್ಟೆಯ ಮೇಲೆ ಕೈಯ್ಯಾಡಿಸುತ್ತ 'ಅಡಿಗೆಯಮನೆಗೆ ಹೋಗೋಣ' ಎಂದನು.

'ಅಲ್ಲೇನಿದೆ' ಎಂದು ರಾಜನು ಪ್ರಶ್ನೆ ಮಾಡಲಾಗಿ ಮಾಣವಕನು 'ಏನಿದೆ ಎಂದರೆ? ಅಲ್ಲಿ ಪಂಚ ಪಕ್ವಾನ್ನಗಳು ಸಿದ್ಧವಿರುವವು. ಪಕ್ವಾನ್ನಗಳನ್ನು ಮಾಡುವ ಯೋಜನೆಗಳೂ ನಡೆದಿರಬಹುದು. ಅವುಗಳನ್ನು ಹೇಗೆ

ಮಾಡುತ್ತಾರೆ ಎಂಬುದನ್ನು ನೋಡುತ್ತ ಕುಳಿತೆವೆಂದರೆ ಉತ್ಕಂಠಿತವಾದ ಮನಸಿಗೆ ಕರವಣೂಕ ತಾನೇ ಆಗುವದು' ಎಂದನು.

" ಮಾಣವಕಾ, ಅಲ್ಲಿ ನಿನಗೆ ಯಾವುದು ಬೇಕೋ ಅದು ನಿನಗೆ ಸಿಗುವದು. ಅದರಿಂದ ನಿನಗೆ ಸಮಾಧಾನವಾಗಬಹುದು. ಆದರೆ ದರ್ಲಭ ವಸ್ತುವಿನ ಪ್ರಾಪ್ತಿಗಾಗಿ ಪ್ರಾರ್ಥಿಸುವ ನನಗೆ ಅದರಿಂದ ಹೇಗೆ ಕರಮಣೂಕವಾಗಬಹುದು? "

' ರಾಜನೇ, ನಿಜವಾಗಿಯೂ ನೀನು ನಿನ್ನ ಆ ಉರ್ವಶಿಯ ದೃಷ್ಟಿಗೆ ಬಿದ್ದಿರುವೆಯಲ್ಲವೆ? '

' ಆಕೆಯ ದೃಷ್ಟಿಗೆ ಬಿದ್ದಿದ್ದೇನೆ. ಅದರಿಂದೇನಾಗಬೇಕಾಗಿದೆ? '

' ಅಂದಮೇಲೆ ಅವಳು ದುರ್ಲಭಳು ಎಂದು ನನಗೆನಿಸುವದೇ ಇಲ್ಲ.'

' ಅವಳ ಲಾವಣ್ಯದ ಮುಂದೆ ಇನ್ನಾವವೂ ನಿಲ್ಲಲಾರವು. '

' ನೀನು ಹೀಗೆನ್ನುವದರ ಮೇಲಿಂದ ನನಗೆ ಹೆಚ್ಚು ಕೌತುಕವೆನಿಸುತ್ತಿದೆ. ನಿನ್ನ ಆ ಉರ್ವಶಿಯು ಬಹಳ ಸುಂದರಿ ಇರುವಳೆಂದಿಯಲ್ಲ! ನಾನು ಹೇಗೆ ಅದ್ವಿತೀಯ ಕುರೂಪಿಯಾಗಿರುವೆನೋ ಹಾಗೆಯೇ ಅವಳೂ ಅದ್ವಿತೀಯ ಸುಂದರಿಯಾಗಿರಬಹುದಲ್ಲವೆ?'

' ಹುಚ್ಚು ಮಾಣವಕನೇ, ಏನೆಂದು ಹೇಳಲಿ! ಅವಳ ಪ್ರತ್ಯೇಕ ಅವಯವಗಳ ವರ್ಣನೆಯನ್ನು ಮಾಡುವದು ಬಹಳ ಕಠಿಣವಿದೆ-ಎಂದು ತಿಳಿದುಕೋ. ಆದ್ದರಿಂದ ಸಂಕ್ಷೇಪವಾಗಿ ವರ್ಣಿಸುತ್ತೇನೆ, ಕೇಳು.'

' ನಮ್ಮ ಸ್ವಾರಿಯು ಕೇಳಲು ಸಿದ್ಧವಾಗಿಯೇ ಇದೆ.'

' ಅವಳು ಭೂಷಣಗಳಿಗೆ ಭೂಷಣಳಾಗಿದ್ದಾಳೆ. ಅವಳ ಸೌಂದರ್ಯದ ಬಗ್ಗೆ ಹೇಳಬೇಕೆಂದರೆ ಸೌಂದರ್ಯ ವಸ್ತುವಿನಬಗ್ಗೆ ಉಪಮೆಯನ್ನು ಕೊಡಬೇಕಾದರೆ ಇವಳ ಉಪಮಾನವನ್ನೇ ಕೊಡಬೇಕಾಗುವದು.'

' ದಿವ್ಯ ರಸದ ಅಭಿಲಾಷೆಯನ್ನು ಮಾಡುವಂಥ ನೀನು ಎಲ್ಲವನ್ನೂ ವರ್ಜಿಸಿ ಚಾತಕವ್ರತವನ್ನು ಹಿಡಿದಿರುವಿ ಎಂದು ಎನಿಸುತ್ತದೆ. ಇರಲಿ, ನೀನೀಗ ಯಾವ ಕಡೆ ಹೊರಟಿರುವಿ?

' ಉತ್ಸುಕನಾದ ಮನುಷ್ಯನಿಗೆ ಏಕಾಂತ ಸ್ಥಳವನ್ನುಬಿಟ್ಟು ಇನ್ನಾವ ಗತಿಯಿದೆ? ನೀನು ನನ್ನನ್ನು ಪ್ರಮುದವನಕ್ಕೆ ಕರೆದುಕೊಂಡು ಹೋಗು. '

ಮಾಣವಕನ ಮನಸ್ಸಿನಲ್ಲಿ ಅತ್ತಕಡೆಗೆ ಹೋಗುವದಿರಲಿಲ್ಲ; ಆದರೆ ರಾಜನು ಹೇಳಿದ ಮೇಲೆ ನಿರುಪಾಯನಾಗಿ ಅವನು ರಾಜನನ್ನು ಆ ಪ್ರಮುದ ವನದ ಕಡೆಗೆ ಕರೆದುಕೊಂಡು ಹೋಗಲನುವಾದನು.

ಇಬ್ಬರೂ ಆ ವನದ ಸಮೀಪಕ್ಕೆ ಬಂದರು. ಆಗ ಮಾಣವಕನು 'ಇಲ್ಲಿ ನೋಡು. ಪ್ರಮುದವನವು ಕಾಣುತ್ತಿದೆ. ಈ ಹೊತ್ತಿಗೆ ನೀನು ಬಂದಿರುವಿಎಂದು ತಿಳಿದು ಈ ದಕ್ಷಿಣವಾಯುವು ವೃಕ್ಷಗಳನ್ನು ಬಗ್ಗಿಸಿ ನಿನ್ನೆದುರಿಗೆ ಬಂದು ನಿನಗೆ ಸತ್ಕಾರ ಮಾಡುತ್ತಿವೆ' ಎಂದು ಹೇಳಿದನು.

ರಾಜನು ಕಾಮಿಯಾಗಿದ್ದನು. ಕಾಮಿಯಾದವನಿಗೆ ,ಪ್ರತಿಯೊಂದು ವಸ್ತುವೂ ತಾನು ಕಾಮಿಸಿದ ವಸ್ತುವೇ ಎಂದು ಭ್ರಾಂತಿಯಾಗುತ್ತಿರುತ್ತದೆ. ಮಾಣವಕನ ಮಾತನ್ನು ಕೇಳಿ ರಾಜನು ಆ ವನದತ್ತ ನೋಡುತ್ತ 'ಈ ವಾಯು ವಿಗೆ ನೀನು ವಿಶೇಷಣ ಕೊಟ್ಟಿದ್ದು ಯೋಗ್ಯವೇ ಆಗಿದೆ. ಈ ಮಲ್ಲಿಗೆಯ ಬಳ್ಳಿಯ ಶೋಭೆಯು ಹೆಚ್ಚುತ್ತಲೇ ಇದೆ. ಈ ಕುಂದದ ಬಳ್ಳಿಯಂತೂ ಕುಣಿಯುತ್ತಲಿದೆ. ಇದರಿಂದ ಒಂದು ಕಡೆ ಸ್ನೇಹವು ಇನ್ನೊಂದು ಕಡೆ ಅನು ಕೂಲತೆಯೂ ಕಾಣಬರುವದರಿಂದ ಅವೂ ಕಾಮಿ ಪುರುಷನ ಹಾಗೆ ಕಾಣು ತ್ತಿವೆ.' ಎಂದಂದನು.

ಈ ಮಾತನ್ನು ಕೇಳಿ ಮಾಣವಕನು ರಾಜನ ಅಭಿನಿವೇಶವು ಯೋಗ್ಯವೇ ಆಗಿದೆ—ಎಂದು ಮನಸಿನಲ್ಲಂದುಕೊಂಡನು. ಇಬ್ಬರೂ ಹೀಗೆ ಮಾತನಾಡಿ ಕೊಳ್ಳುತ್ತ ಆ ಪ್ರಮುದವನದ ಬಾಗಿಲಿಗೆ ಬಂದು ತಲುಪಿದರು. ಆಗ ರಾಜನು ಮಾಣವಕನನ್ನು ಮೊದಲಿಗೆ ಹೊಗಿಸಿ ತಾನು ಅವನ ಹಿಂದಿನಿಂದ ಸಾಗಿದನು.

ನಿಜವಾಗಿಯೇ ಅಸ್ವಸ್ಥವಾಗಿರುವ ಮನಸ್ಸನ್ನು ಸಾಂತ್ವನಗೊಳಿಸುವ ದಕ್ಕೆಂದು ರಾಜನು ಆ ವನದ ಕಡೆಗೆ ಬಂದಿದ್ದನು; ಆದರೆ ಆ ವನದ ಮನೋ ಹಾರಿಣಿ ಶೋಭೆಯನ್ನು ಕಂಡು ಅವನ ಮನಸು ಮತ್ತಿಷ್ಟು ಅಶಾಂತವಾಗಿ— 'ಮಾಣವಕನೇ, ಚಿತ್ತದ ಅಸ್ವಾಸ್ಥ್ಯತೆಯೆಂಬ ಆಪತ್ತಿಯ ಪರಿಹಾರ ಮಾಡಿ ಕೊಳ್ಳುವಾ ಎಂದು ಈ ವನಕ್ಕೆ ಬಂದರೆ ಇಲ್ಲಿಯ ವಾತಾವರಣದಿಂದ ವಿಪರೀತ ಪರಿಣಾಮವುಂಟಾಯಿತಲ್ಲ! ಈ ವನವು ನನಗೆ ಶಾಂತಿಯನ್ನು ನೀಡಲಾರದು. ನದಿಯ ಪ್ರವಾಹದ ವಿರುದ್ಧ ಈಸು ಬಿದ್ದವನು ಎಷ್ಟು ಕಸುವಿನಿಂದ ಈಸಿದರೂ ಏನು ಪ್ರಯೋಜನ?' ಎಂದನು.

‘ ಅದು ಹೇಗೆ, ಹೇಳು.’

‘ ನನ್ನ ಮನಸು ದುಷ್ಪ್ರಾಪ್ಯ ವಸ್ತುವಿನ ಆಸೆಯನ್ನು ಮಾಡುತ್ತಿದೆ. ಏನು ಮಾಡಿದರೂ ಅದರಿಂದ ನಿವೃತ್ತಿಯಾಗದಾಗಿದೆ. ಅದರಲ್ಲಂತೂ ಮದನನು ತೀರ ತಲ್ಲಣಗೊಳಿಸುತ್ತಿರುತ್ತಾನೆ. ಇಂಥ ವೇಳೆಯಲ್ಲಿ ದಕ್ಷಿಣದ ಕಡೆಯ ಸುಗಂಧ ವಾಯುವು ಮಾಡುವ ಸತ್ಕಾರದಿಂದ ನನಗೆ ಶಾಂತಿಯು ದೊರಕಲಾರದು.’

‘ ಹಾಗೆ ವಿಲಾಪಿಸಬೇಡ. ಮನೋರಥವನ್ನು ಪೂರ್ಣ ಮಾಡುವ ಮದನನೇ ಬೇಗನೆ ಬಂದು ನಿನಗೆ ನೆರವಾಗುವನು. ’

‘ ಬ್ರಾಹ್ಮಣನ ವಚನವನ್ನು ಸೆರಗಿನಲ್ಲಿ ಕಟ್ಟಿಕೊಂಡು ಹೊರಡುತ್ತೇನೆ ’ ಎಂದೆನ್ನುತ್ತ ರಾಜನೂ ಮಾಣವಕನೂ ವನದಲ್ಲಿ ಪ್ರವೇಶ ಮಾಡಿದರು.

‘ ರಾಜನೇ, ಈಗ ವಸಂತಋತುವು ಆಗಮಿಸಿರುವದರಿಂದ ಈ ಪ್ರಮದ ವನಕ್ಕೆ ಎಷ್ಟು ಶೋಭೆ ಬಂದಿದೆ–ಎಂಬದನ್ನು ನೋಡು. ’

‘ ಚೆನ್ನಾಗಿಯೇ ಲಕ್ಷ್ಯಗೊಟ್ಟು ನೋಡುತ್ತಿದ್ದೇನೆ. ಮಲ್ಲಿಗೆಯ ಮೊಗ್ಗುಗಳು, ಅಶೋಕದ ಕೆಂಪು ಹೂಗಳು, ಮಾವಿನ ಹೂಗಳು ! ಎಷ್ಟೊಂದು ಸೊಗಸಾಗಿವೆ. ಈ ವಸಂತಲಕ್ಷ್ಮಿಯು ಬಾಲ್ಯ ಮತ್ತು ತಾರುಣ್ಯ ಅವಸ್ಥೆಗಳ ಮಧ್ಯದಲ್ಲಿ ಕಾಲಿಟ್ಟಿರುವ ಹಾಗೆ ಕಾಣುತ್ತದೆ. ’

ರಾಜನು ಆ ವಿಚಾರವೊಂದರಲ್ಲಿಯೇ ಗುಂಗಾಗಿಬಿಟ್ಟದ್ದರಿಂದ ಅವನು ವಸಂತಲಕ್ಷ್ಮಿಯ ವರ್ಣನೆಯನ್ನೇ ಮಾಡುತ್ತಿದ್ದನು. ಇತ್ತ ಮಾಣವಕನ ಕಾಲುಗಳು ನೋಯತೊಡಗಿದ್ದವು. ಅವನ ಮನಸಿನಲ್ಲಿ ಎಲ್ಲಿಯಾದರೂ ಹೋಗಿ ಕುಳಿತುಕೊಳ್ಳುವದಿತ್ತು. ಅಷ್ಟರಲ್ಲಿ ದುಂಡುಮಲ್ಲಿಗೆಯ ಮಂಡಪ ವೊಂದು ಅವರ ಕಣ್ಣಿಗೆ ಬಿದ್ದಿತು. ಅದನ್ನು ಕಂಡು ಮಾಣವಕನು ‘ ನೋಡು, ನೀಲಮಣಿಯ ಶಿಲೆಯನ್ನು ಕೂಡಿಸಿರುವ ಈ ದುಂಡುಮಲ್ಲಿಗೆಯ ಮಂಡಪವು ಭ್ರಮರಗಳ ಸಮುದಾಯದಿಂದ ಕೆಳಗೆ ಬಿದ್ದಿರುವ ಹೂಗಳಿಂದ ನಿನ್ನ ಪೂಜೆ ಯನ್ನೇ ಮಾಡುತ್ತಿರುವ ಹಾಗೆ ಕಾಣಿಸುತ್ತದೆ. ಆದಕಾರಣ ಇಲ್ಲೊಂದು ಕ್ಷಣಹೊತ್ತು ಕುಳಿತುಕೊಂಡು ಇದನ್ನು ಅನುಗ್ರಹಿಸಬೇಕು.’

‘ ನಿನ್ನ ಇಚ್ಛೆಯಂತೆಯೇ ಆಗಲಿ ’ ಎಂದು ರಾಜನೆನ್ನಲಾಗಿ, ಇಬ್ಬರೂ ಮಂಡಪದಲ್ಲಿ ಕುಳಿತರು. ಆಮೇಲೆ ಮಾಣವಕನು ‘ ಮಿತ್ರಾ, ಹೇಗಾದರೂ

ಇಲ್ಲಿ ಕುಳಿತಿರುವೆಯಲ್ಲ ! ಈ ಸುಂದರ ಬಳ್ಳಿಯ ರಮಣೀಯತೆಯನ್ನು ಕಂಡು ಉರ್ವಶಿಯಿಂದುಂಟಾಗಿರುವ ಉತ್ಕಂಠಿತೆಯನ್ನು ಹೇಗಾದರೂ ಮಾಡಿ ಶಮನಮಾಡಿಕೊಳ್ಳು ' ಎಂದು ಹೇಳಿದನು.

ಅದನ್ನು ಕೇಳಿ ರಾಜನು ನಿಟ್ಟುಸಿರು ಬಿಟ್ಟು ' ಈ ವನರಾಜಿಯ ರಮಣೀಯತೆಯಿಂದ ಉರ್ವಶಿಯ ಸೌಂದರ್ಯವನ್ನು ಕುಡಿದ ಕಣ್ಣುಗಳಿಗೆ ತೃಪ್ತಿಯುಂಟಾಗದು. ಕಾರಣ ಯಾವ ಉಪಾಯದಿಂದ ಮನಸು ಶಾಂತ ವಾಗುವದೋ ಅಂಥ ಉಪಾಯವನ್ನು ಹುಡುಕಿ ತೆಗೆ ' ಎಂದು ಹೇಳಿದನು.

' ಪೂರ್ವಕಾಲದಲ್ಲಿ ಅಹಲ್ಯೆಯನ್ನು ಇಚ್ಛಿಸಿದ ಇಂದ್ರನಿಗೆ ವಜ್ರವು ಸಹಾಯವಾಗಿತ್ತು. ಈಗ ಉರ್ವಶಿಯ ಬಗ್ಗೆ ಉತ್ಸುಕನಾದ ನಿನಗೆ ನಾನು ಸಹಾಯ ಮಾಡುತ್ತೇನೆ. ವಸ್ತುತಃ ನೀವಿಬ್ಬರೂ ಉನ್ಮತ್ತರಾಗಿರುವಿರಿ.'

' ಅದಿರಲೊಲ್ಲದು. ನೀನು ಯಾವುದಾದರೂ ಉಪಾಯ ಹುಡುಕಿ ತೆಗೆಯುವಿಯೋ ಇಲ್ಲವೋ ಹೇಳು. '

ಮಾಣವಕನು ಕಣ್ಣು ಮುಚ್ಚಿ ಧ್ಯಾನಸ್ಥನಾಗಿ ಕುಳಿತು ' ರಾಜನೇ, ನೋಡು. ಉಪಾಯವನ್ನು ಹುಡುಕುವದಕ್ಕಾಗಿ ಚಿಂತನ ಮಾಡುತ್ತೇನೆ. ನೀನು ಪುನಃ ವಿಲಾಪಮಾಡಿ ನನ್ನ ಸಮಾಧಿಯನ್ನು ಭಂಗಗೊಳಿಸಬೇಡ ' ಎಂದನು. ಅಷ್ಟರಲ್ಲಿ ಅವನ ಬಲಗಣ್ಣು ಹಾರಿತು. ಈ ಶುಭ ನಿಮಿತ್ತವನ್ನು ಕಂಡು ' ಅಹುದು, ನಾನು ನಿಜವಾಗಿಯೇ ಹಂಚಿಕೆಯನ್ನು ಹುಡುಕುವವನು' ಎಂದು ಮನಸ್ಸಿನಲ್ಲಿಯೇ ಅಂದುಕೊಂಡನು.

ಉಪಾಯ ಚಿಂತನೆಯ ಸಮಾಧಿಯಲ್ಲಿ ಧ್ಯಾನಸ್ಥನಾಗಿರುವ ಮಾಣವಕ ನನ್ನು ನೋಡಿ ರಾಜನು ' ಪೂರ್ಣ ಚಂದ್ರಮುಖಿಯಾದ ಉರ್ವಶಿಯು ದೊರೆಯುವದು ಬಲು ಕಠಿಣವಿದೆ. ಕಾಮಾಸಕ್ತನಾದ ನಾನು ಏನಾದರೂ ಬಡಬಡಿಸುತ್ತಿರುವದಿಲ್ಲ. ಇಚ್ಛಿತ ವಸ್ತುವು ಪ್ರಾಪ್ತವಾಗಿ ಯಾವಾಗ ಸನ್ಮುಖ ದಲ್ಲಿರುವದೋ ಆಗ ಮಾತ್ರ ಮನವು ತನ್ನಷ್ಟಕ್ಕೆ ತಾನೇ ತೃಪ್ತಿಹೊಂದುತ್ತದೆ.' ಎಂದು ಮಾತನಾಡಿ ಮದನಾಸಕ್ತನಾದನು.

ಅವನ ಬಾಯಿಯಿಂದ ಮೇಲಿನ ವಾಕ್ಯಗಳು ಹೊರಡುವಷ್ಟರಲ್ಲಿಯೇ ಉರ್ವಶಿ ಮತ್ತು ಚಿತ್ರಲೇಖೆಯರು ವಿಮಾನಾರೂಢರಾಗಿ ಅಲ್ಲಿಗೆ ಆಗಮಿಸಿ ದರು. ರಾಜನು ಉರ್ವಶಿಯ ದರ್ಶನದಿಂದ ಮೋಹಿತನಾದಂತೆ ಉರ್ವಶಿಯೂ

ರಾಜನ ದರ್ಶನದಿಂದ ಮಾರುಹೋಗಿದ್ದಳು. ರಾಜನ ನಿರೋಪ ತೆಗೆದು ಕೊಂಡು ಊರ್ವಶಿಯು ಇಂದ್ರನ ಆಜ್ಞೆಯ ಮೇರೆಗೆ ದೇವಲೋಕಕ್ಕೆ ತೆರಳಿದ್ದರೂ ಅವಳಿಗೆಷ್ಟು ಸಮಾಧಾನವಿರಲಿಲ್ಲ. ಸದಾವಕಾಲವೂ ರಾಜನ ಚಿಂತೆಯಲ್ಲಿಯೇ ಮಗ್ನಳಾಗಿದ್ದಳು. ರಾಜನನ್ನು ಕಂಡು ತನ್ನ ಚಿತ್ತವನ್ನು ಸಾಂತ್ವನಗೊಳಿಸುವದಕ್ಕಾಗಿ ಅವಳು ತನ್ನ ಸಖಿಯಾದ ಚಿತ್ರಲೇಖೆಯೊಂದಿಗೆ ವಿಮಾನಾರೂಢಳಾಗಿ ಹೊರಟುಬಿಟ್ಟಳು.

ವಿಮಾನರೂಢಳಾದಾಗ ಎಲ್ಲಿಗೆ ಹೋಗಬೇಕಾಗಿದೆ ಎಂಬುದರ ಕಲ್ಪನೆಯೇ ಅವಳಿಗಿರಲಿಲ್ಲವಾದ್ದರಿಂದ ಚಿತ್ರಲೇಖೆಯು 'ಸಖೀ ಊರ್ವಶೀ, ಯಾವದೂ ಕಾರ್ಯೋದ್ದೇಶವಿಲ್ಲದೆ ಈಗ ಯಾವ ಕಡೆಗೆ ಹೊರಟಿರುವಿ?' ಎಂದು ಅವಳನ್ನು ಕೇಳಿದಳು.

ರಾಜನನ್ನು ನೆನಸಿ ಮದನನಿಂದ ವ್ಯಥಿತಳಾದ ಊರ್ವಶಿಯು ನಾಚಿದವಳಾಗಿ 'ಚಿತ್ರಲೇಖೆಯೇ, ಹೇಮಕೂಟಪರ್ವತದ ಶಿಖರದಮೇಲೆ ನನ್ನ ಕೊರಳೊಳಗಿನ ಮಾಲೆಯು ಬಳ್ಳಿಯೊಂದರಲ್ಲಿ ಸಿಕ್ಕಿಬಿದ್ದಾಗ ಅದನ್ನು ಬಿಡಿಸಿಕೊಡಲು ನಿನಗೆ ಹೇಳಿದೆನು. ಆಗ ನೀನು ನಗುತ್ತ 'ಅದು ಗಟ್ಟಿಯಾಗಿ ಸಿಕ್ಕಿಬಿದ್ದಿದೆ. ಬಿಡಿಸಲು ಸಾಧ್ಯವಿಲ್ಲ' ಎಂದಂದೆ. ಈಗ 'ಯಾವ ಕೆಲಸವಿಲ್ಲದೆ ಎತ್ತ ಹೊರಟಿರುವಿ' ಎಂದು ಕೇಳುವಿ ಅಂದರೆ ಏನು?'

ಚಿತ್ರಲೇಖೆಯು ಅವಳ ಮಾತಿನ ಇಂಗಿತವನ್ನರಿತು 'ಹಾಗಾದರೆ ರಾಜರ್ಷಿಯಾದ ಪುರೂರವನ ಕಡೆಗೆ ಹೊರಟಿರುವಿಯೇನು?' ಎಂದು ಕೇಳಿದಳು.

'ಅಹುದಹುದು. ತಿಳಿಯುವದಿಲ್ಲವೇ? ಇದು ನನ್ನ ನಿರ್ಲಜ್ಜತನವಾದ ಉದ್ಯೋಗವು.'

'ಈ ಮೊದಲು ಯಾರನ್ನಾದರೂ ಅಲ್ಲಿಗೆ ಕಳಿಸಿಕೊಟ್ಟಿರುವಿಯಾ ಏನು?'

'ಬೇರೆ ಯಾರನ್ನು ಕಳಿಸುವದಿದೆ? ಮನಸನ್ನೇ ಅಟ್ಟಿ ಬಿಟ್ಟಿದ್ದೇನೆ.'

'ಅತ್ತ ಕಡೆಗೆ ಹೋಗಲು ನಿನಗೆ ಯಾರು ಪ್ರೇರೇಪಿಸುತ್ತಾರೆ?'

'ಪ್ರತ್ಯಕ್ಷ ಮದನನ್ನು ಬಿಟ್ಟು ಇನ್ನಾರು ಪ್ರೇರೇಪಿಸುವವರು?'

'ಅಂದಮೇಲೆ ನಾನಿನ್ನು ಏನೂ ಮಾತನಾಡಲಾರೆ.'

ಕೆಲವು ದಿನಗಳ ಹಿಂದೆ ಕೇಶಿದೈತ್ಯನು ಅವಳನ್ನು ಎತ್ತಿಕೊಂಡೊಯ್ದಾಗ ಪುರೂರವನು ಅವಳನ್ನು ಬಿಡಿಸಿ ತಂದಿದ್ದನು. ಅದರ ನೆನಪು ಇನ್ನೂ ಮರೆತಿರಲಿಲ್ಲ. ಅದನ್ನೇ ನೆನೆಯುತ್ತ ಊರ್ವಶಿಯು 'ನನ್ನನ್ನು ಅತ್ತ ಕರೆದುಕೊಂಡು ಹೋಗು; ಯಾವ ತೊಂದರೆಯೂ ಬಾರದಂತೆ ದಾರಿಯನ್ನು ತೆಗೆ' ಎಂದು ಚಿತ್ರಲೇಖೆಗೆ ಹೇಳಿಕೊಂಡಳು.

ಈ ಅಪ್ಸರೆಯರಿಬ್ಬರಿಗೂ ಹೊರಗೆ ಹೋಗುವ ಪ್ರಸಂಗಗಳು ಮೇಲಿಂದಮೇಲೆ ಬರುತ್ತಿದ್ದುದರಿಂದ ಅವರಿಗೆ ಸಂಕಟಗಳು ತಲೆದೋರದಂತೆ ದೇವಗುರುವಾದ ಬೃಹಸ್ಪತಿಯು 'ಶಿಖಾಬಂಧಿನಿ' ಎಂಬ ವಿದ್ಯೆಯನ್ನು ಹೇಳಿಕೊಟ್ಟಿದ್ದನು. ಆದರೆ ಊರ್ವಶಿಯ ಮನವು ಪುರೂರವನಲ್ಲಿ ನಟ್ಟುಹೋದುದರಿಂದ ಅವಳಿಗೆ ಆ ವಿದ್ಯೆಯ ನೆನಪೇ ಹಾರಿಹೋಗಿತ್ತು. ಚಿತ್ರಲೇಖೆಯು ಆ ವಿದ್ಯೆಯ ನೆನಪು ಮಾಡಿದಳು. ಆಗ ಊರ್ವಶಿಗೆ ನೆನಪಾದಂತಾಗಿ 'ಈ ವಿದ್ಯೆಯ ಪ್ರಯೋಗವನ್ನು ಹೇಗೆ ಮಾಡಬೇಕೆಂಬುದರ ಸ್ಮರಣವು ನಿನಗೆ ಚನ್ನಾಗಿ ಇರುತ್ತದೆಯೋ' ಎಂದು ಚಿತ್ರಲೇಖೆಯನ್ನು ಕೇಳಿದಳು.

ಚಿತ್ರಲೇಖೆಯು 'ಅದೆಲ್ಲವೂ ಹೃದಯಕ್ಕೆಗೊತ್ತಿದೆ' ಎಂದು ಹೇಳಿದಳು.

ಹೀಗೆ ಮಾತನಾಡುತ್ತ ಸಾಗಿರುವಷ್ಟರಲ್ಲಿ ಅವರ ವಿಮಾನವು ಪ್ರತಿಷ್ಠಾನದ ಸಮೀಪಕ್ಕೆ ಬಂದಿತು. ರಾಜಗೃಹದ ಕಡೆಗೆ ಬೆರಳು ಮಾಡಿ ತೋರಿಸುತ್ತ ಚಿತ್ರಲೇಖೆಯು 'ಸಖಿಯೇ ನೋಡು! ನೋಡು! ಗಂಗಾ ಹಾಗೂ ಯಮುನಾ ಸಂಗಮದಿಂದ ಪವಿತ್ರವಾದ ಉದಕದಲ್ಲಿ ನಿನ್ನ ಪ್ರತಿಬಿಂಬವು ಕಾಣತೊಡಗಿದೆ. ಮತ್ತು ಪ್ರತಿಷ್ಠಾನ ಪಟ್ಟಣದ ಶಿರೋಭೂಷವಾಗಿರುವ ರಾಜರ್ಷಿಯ ಅರಮನೆಯ ಹತ್ತಿರಕ್ಕೆ ನಾವು ಬಂದು ಬಿಟ್ಟಿದ್ದೇವೆ' ಎಂದಳು.

ಅದನ್ನು ಕೇಳಿ ಊರ್ವಶಿಯು ಆಶಾಬದ್ಧಳಾಗಿ ರಾಜಭವನವನ್ನು ನೋಡಿ 'ನನಗಂತೂ ಸ್ವರ್ಗವೇ ಇಲ್ಲಿ ಬಂದಂತೆನಿಸಿದೆ. ಸಂಕಟದಲ್ಲಿ ಸಿಕ್ಕು ಬಿದ್ದವರ ಮೇಲೆ ದಯೆ ತೋರುವಂಥ ಆ ಪುರೂರವನು ಈಗೆಲ್ಲಿರಬಹುದು?' ಎಂದು ಚಿತ್ರಲೇಖೆಯನ್ನು ವಿಚಾರಿಸಿದಳು.

ಅವರ ವಿಮಾನವು ಆಕಾಶದಲ್ಲಿದ್ದುದರಿಂದ ಭೂಮಿಯ ಮೇಲೆ ನಡೆದುದೆಲ್ಲವೂ ಅವರಿಗೆ ಕಂಡು ಬರುತ್ತಿತ್ತು. ಚಿತ್ರಲೇಖೆಯು ಪ್ರಮದವನದಲ್ಲಿ ಕುಳಿತಂಥ ರಾಜನನ್ನು ನೋಡಿ, ಅವನಲ್ಲಿರುತ್ತಾನೆಂಬುದನ್ನು ಊರ್ವಶಿಗೆ

ಹೇಳಿದೆ 'ಇಂದ್ರನ ನಂದನವನದಂತೆ ಕಾಣುವ ಆ ವನದಲ್ಲಿಳಿದು ರಾಜನನ್ನು ಹುಡುಕೋಣ' ಎಂದು ಮಾರ್ನುಡಿದಳು.

ಹೀಗೆ ವಿಚಾರ ಮಾಡಮಾಡುತ್ತ ಅವರಿಬ್ಬರೂ ವಿಮಾನದಿಂದ ಆ ಪ್ರಮದವನದಲ್ಲಿಳಿದರು. ಆ ವನವನ್ನು ಪ್ರವೇಶಿಸಿ ಅತ್ತಿತ್ತ ಅಲೆದಾಡುತ್ತ ಸಾಗಲಾಗಿ ಮಾಣವಕನೊಂದಿಗೆ ಮಲ್ಲಿಗೆಯ ಮಂಟಪದಲ್ಲಿ ಕುಳಿತಂಥ ರಾಜನು ಅವರ ದೃಷ್ಟಿಗೆ ಬಿದ್ದನು. ರಾಜನನ್ನು ನೋಡಿ, ಚಿತ್ರಲೇಖೆಯು ಆನಂದದಿಂದ 'ನೋಡು! ನೋಡಲ್ಲಿ! ಭಗವಾನ್ ಚಂದ್ರಮನು ಕೌಮುದಿಯ ದಾರಿಯನ್ನು ಕಾಯುತ್ತಿರುವಂತೆ ನಿನ್ನ ಹೃದಯವಲ್ಲಭನು ನಿನ್ನ ಮಾರ್ಗಸಿರೀಕ್ಷಣೆ ಮಾಡುತ್ತಲಿದ್ದಾನೆ' ಎಂದಂದಳು.

'ಅಂದು ನೋಡಿದ್ದಕ್ಕಿಂತಲೂ ಇಂದೀಗ ಮಹಾರಾಜರು ಹೆಚ್ಚು ಚಂದ ಕಾಣುತ್ತಿದ್ದಾರೆ.'

'ಅಹುದು. ಹಾಗೆ ಕಾಣುವದು ಯೋಗ್ಯವಾಗಿದೆ. ನಾವು ಅವರ ಹತ್ತಿರ ಹೋಗೋಣ ಬಾ.'

ಉರ್ವಶಿಯು ರಾಜನಲ್ಲಿ ಅನುರಕ್ತಳಾಗಿದ್ದರೂ ಅವನು ಇವಳಲ್ಲಿ ಎಷ್ಟು ಅನುರಕ್ತನಾಗಿದ್ದಾನೆಂಬದು ಅವಳಿಗೆ ತಿಳಿದಿರಲಿಲ್ಲ. ಹೆಂಗುಸರಿಗೆ-ತಾವು ಯಾರನ್ನು ಪ್ರೀತಿಸುತ್ತಿರುತ್ತಾರೋ ಅಂಥವರ ಪ್ರೀತಿಯ ಪರೀಕ್ಷೆಯನ್ನು ತೆಗೆದುಕೊಳ್ಳಬೇಕೆಂಬ ಇಚ್ಛೆಯು ಬಹಳ ಪ್ರಬಲವಿರುತ್ತದೆ. ಅದರಲ್ಲಂತೂ ಉರ್ವಶಿಯಂಥ ಅಪ್ಸರೆಗೆ ಹೆಚ್ಚಾಗಿರುವದರಲ್ಲಿ ಆಶ್ಚರ್ಯವೇನು? ಆದುದರಿಂದ ಉರ್ವಶಿಯು 'ನಾನು ಈ ವೇಳೆಗೆ ಅವರ ಹತ್ತಿರ ಬರಲಾರೆ. ತಿರಸ್ಕಾರಿಣೀ ವಿದ್ಯೆಯಿಂದ ನಾವು ಅದೃಶ್ಯರಾಗಿ ಅವರ ಸಮೀಪಕ್ಕೆ ಹೋಗಿ, ಆವರು ಏನೇನು ಮಾತನಾಡುತ್ತಿರುವರೆಂಬದನ್ನು ಮೊದಲು ಕೇಳೋಣ. ಮಿತ್ರನೊಂದಿಗೆ ಏಕಾಂತದಲ್ಲಿ ಕುಳಿತುಕೊಂಡು ಅವರು ನಡೆಸಿದ್ದಾದರೂ ಏನು-ಎಂಬದನ್ನು ಮೊದಲು ನಾವು ಕಂಡುಹಿಡಿಯೋಣ' ಎನ್ನಲಾಗಿ ಚಿತ್ರಲೇಖೆಯು 'ನಿನ್ನ ಮನಸಿಗೆ ಬಂದಂತಾಗಲಿ' ಎಂದು ಹೇಳಿದಳು. ಆಗ ಅವರಿಬ್ಬರೂ ತಿರಸ್ಕಾರಿಣೀ ವಿದ್ಯೆಯಿಂದ ಅದೃಶ್ಯರಾಗಿ ರಾಜನ ಬಳಿಗೆ ತೆರಳಿದರು.

ಇತ್ತ ಮಾಣವಕನು ಏನಾದರೊಂದು ಹಂಚಿಕೆಯನ್ನು ಹುಡುಕುವ ದಕ್ಕಾಗಿ ಸಮಾಧಿಯನ್ನು ಹಚ್ಚಿಕೊಂಡು ಕುಳಿತು ಬಹಳ ಹೊತ್ತಾಗಿತ್ತು. ಅವನು ಒಮ್ಮಿಂದೊಮ್ಮೆಲೆ ಸಮಾಧಿಯಿಂದ ಎಚ್ಚತ್ತು 'ಓಹೋ! ದುರ್ಲಭರಾದ ಪ್ರಿಯ ಜನರ ಸಮಾಗಮವಾಗುವ ಶಕ್ತಿಯನ್ನು ನಾನು ಕಂಡುಹಿಡಿದಿದ್ದೇನೆ' ಎಂದನು.

ಮಾಣವಕನ ಮಾತು ರಾಜನಿಗೆ ಕೇಳಿಸಲಿಲ್ಲ. ಯಾಕೆಂದರೆ ಅವನು ತನ್ನ ನಾದಿನಲ್ಲಿಯೇ ಗುಂಗಾಗಿದ್ದನು. ಅದರಿಂದ ಮಾಣವಕನಿಗೆ ರಾಜನಿಂದ ಉತ್ತರವು ದೊರೆಯಲಿಲ್ಲ. ಆದರೆ ಮಾಣವಕನ ಮಾತನ್ನು ಕೇಳಿದ ಊರ್ವಶಿಯ ಮನಸು ಚಡಪಡಿಸಹತ್ತಿತು.

'ರಾಜನು ಯಾವಳೋ ಸ್ತ್ರೀಯ ಚಿಂತೆಯಲ್ಲಿದ್ದಾನೆ. ಅವಳ ಶೋಧ ಮಾಡಲು ಮತ್ತೊಬ್ಬನಿಗೆ ಹಚ್ಚಿ, ವಿನೋದ ಮಾಡಿಸಿಕೊಳ್ಳುವಂತಿದೆ. ಅಂಥ ಧನ್ಯಳಾದ ಸ್ತ್ರೀ ಯಾವಳಿರಬಹುದು?'

'ನೀನೇ ಧ್ಯಾನಸ್ಥಳಾಗಿ ವಿಚಾರಮಾಡಿ ನೋಡು. ಅವಳಾರೆಂಬದು ನಿನಗೇ ಹೊಳೆಯುವದು.'

'ಹಾಗೆ ಮಾಡಲು ನನ್ನ ಶಕ್ತಿಯೂ ಸಾಲದು; ಭಯವೂ ಬರುತ್ತಿದೆ.'

ತಾನು ಆಡಿದ ಮಾತಿಗೆ ರಾಜನು ಕಿವಿಗೊಡಲಿಲ್ಲೆಂದು ತಿಳಿದು ಮಾಣವಕನು ಮತ್ತೊಮ್ಮೆ ಅದನ್ನೇ ಉಚ್ಚರಿಸಿದುದನ್ನು ಕೇಳಿ ರಾಜನು 'ಹಾಗಾದರೆ ಹೇಳು' ಎಂದು ಅವನನ್ನು ವಿಚಾರಿಸಿದನು.

'ನೀನು ಕನಸು ಕಾಣು. ಆ ಕನಸಿನಲ್ಲಿ ನಿನ್ನವಳ ಸಮಾಗಮವಾಗ ಲೆಂದು ಬಗೆದು ಗಾಢವಾದ ನಿದ್ದೆಯನ್ನು ಮಾಡು. ಇಲ್ಲವೆ ನಿನ್ನ ಆ ಊರ್ವಶಿಯ ಚಿತ್ರವನ್ನು ತೆಗೆದು, ಅದರಲ್ಲಿ ಮನಸಿಟ್ಟು, ನಿನ್ನ ಚಿಂತೆಯನ್ನು ಕಡಮೆ ಮಾಡಿಕೋ' ಎಂಬ ಮಾಣವಕನ ಮಾತುಗಳನ್ನು ಕೇಳಿದ ಊರ್ವಶಿಯು ತನ್ನ ಹೃದಯವನ್ನುದ್ದೇಶಿಸಿ 'ಇನ್ನಾದರೂ ಸಮಾಧಾನವನ್ನು ಹೊಂದು' ಎಂದು ತನ್ನಷ್ಟಕ್ಕೆ ತಾನೇ ಅಂದುಕೊಂಡಳು.

ಮಾಣವಕನು ಸೂಚಿಸಿದ ಎರಡೂ ಉಪಾಯಗಳನ್ನು ಕೇಳಿಕೊಂಡು ರಾಜನು 'ಅವೆರಡೂ ತನ್ನಿಂದ ಸಾಧ್ಯವಿಲ್ಲ. ಯಾಕೆಂದರೆ ಕಾಮಬಾಣ ಪ್ರಹಾರದಿಂದ ಹೃದಯವು ಜರ್ಜರಿತವಾಗಿರುವಾಗ ಸ್ವಪ್ನದಲ್ಲಿ ಸಮಾಗಮ

ವಾಗುವ ನಿದ್ರೆಯಾದರೂ ಹೇಗೆ ಬರಬೇಕು ? ಆ ಸುಂದರಮುಖಿಯ ಚಿತ್ರ ವನ್ನು ತೆಗೆಯುವದೂ ನನ್ನಿಂದಾಗದ ಮಾತು ' ಎಂದನು. ಅದನ್ನು ಕೇಳಿ ಚಿತ್ರಲೇಖೆಯು ' ಈ ಮಾತನ್ನು ಕೇಳಿದೆಯಾ ? ' ಎಂದು ಉರ್ವಶಿಯನ್ನು ವಿಚಾರಿಸಿದಳು.

ಉರ್ವಶಿಯು ' ಓಹೋ, ಕೇಳಿದೆನು. ಆದರೆ ಹೃದಯಕ್ಕೆ ಇಷ್ಟ ರಿಂದಲೆ ಪೂರ್ತಿಯಾಗಿ ಸಮಾಧಾನವುಂಟಾಗದು ' ಎಂದುತ್ತರಿಸಿದಳು.

ಮಾಣವಕನು ಶ್ರಮಬಟ್ಟು ಶೋಧಿಸಿದ ಎರಡೂ ಉಪಾಯಗಳು ರಾಜನಿಗೆ ಅಸಮ್ಮತವಾದುದರಿಂದ ಖಿನ್ನಮನಸ್ಕನಾಗಿ ' ಮಹಾರಾಯಾ, ನನ್ನ ಬುದ್ಧಿಯಿಷ್ಟೇ. ಈ ಮಡ್ಡ ತಲೆಗೆ ಇನ್ನಾವ ಉಪಾಯಗಳೂ ತೋಚವು ' ಎಂದು ಹೇಳಿ ದೊಡ್ಡ ನಿಟ್ಟುಸಿರನ್ನು ಬಿಟ್ಟನು.

ರಾಜನೂ ನಿಟ್ಟುಸಿರು ಬಿಟ್ಟು ' ನನಗದೆಷ್ಟು ದುಃಖವಾಗುತ್ತಿದೆಂಬುದರ ಅರಿವು ಅವಳಿಗೆ ಇದ್ದಿರಲಾರದು. ಮೇಲಾಗಿ ಅವಳು ದೇವಲೋಕವಾಸಿ, ನಾನು ಅವಳಲ್ಲಿ ಅನುರಕ್ತನಾಗಿರುವ ಸಂಗತಿಯು ಗೊತ್ತಿದ್ದೂ ತನ್ನ ದಿವ್ಯ ಪ್ರಭಾವದಿಂದ ನನ್ನನ್ನು ಕಡೆಗಣಿಸಿರಲೂ ಸಾಕು. ಅವಳ ಸಮಾಗಮವಾಗ ಬೇಕೆಂಬ ನನ್ನ ಮನೋರಥವು ಫಲಿಸದೆ ಹೋದುದಕ್ಕೆ ನಾನು ಆಶೆಯನ್ನು ತೊರೆದು ಮದನನಿಗೆ ಧನ್ಯವಾದಗಳನ್ನು ಅರ್ಪಿಸುವದೇ ಮೇಲು. '

ಚಿತ್ರಲೇಖೆಯು ಈ ವಾಕ್ಯವನ್ನು ಕೇಳಿ ' ಉರ್ವಶೀ, ಈ ಮಾತು ಗಳನ್ನೂ ಕೇಳಿದೆಯಾ ? ' ಎಂದು ಅವಳ ಕಡೆಗೆ ನೋಡಿದಳು.

' ನನ್ನ ಬಗ್ಗೆ ಎಷ್ಟೊಂದು ಆತ್ಮೀಯ ಭಾವನೆಯನ್ನು ಮಾಡಿಕೊಂಡಿ ರುವರಲ್ಲ ಇವರು ! ನಾನೂ ಇವರಲ್ಲಿ ಎಷ್ಟೊಂದು ಅನುರಕ್ತಳಾಗಿರುವೆ ನೆಂಬುದನ್ನು ಇವರಿಗೆ ತಿಳಿಸಲೇಬೇಕು. ಇಲ್ಲದಿದ್ದರೆ ಅನರ್ಥವಾದೀತು. ಆದರೆ ಇವರ ಕಣ್ಣಿಗೆ ಮಾತ್ರ ಬಿದ್ದು ಉಪಯೋಗವಿಲ್ಲ. ಆದ್ದರಿಂದ ನನ್ನ ಶಕ್ತಿಯಿಂದ ಭೂರ್ಜಪತ್ರವೊಂದನ್ನು ನಿರ್ಮಿಸಿ, ಅದರ ಮೇಲೆ ನನ್ನ ಮನೋಭಾವನೆಯನ್ನು ಬರೆದು, ಇವರ ಮುಂದೆ ಎಸೆಯಬೇಕೆಂದು ನನ ಗೆನಿಸುತ್ತಿದೆ. '

' ಹಾಗೆ ಮಾಡುವದು ನನಗೂ ಸೂಕ್ತವೆಂದು ಕಾಣುವದು ' ಎಂಬ ಚಿತ್ರಲೇಖೆಯ ಮತವನ್ನು ಕಂಡು, ಉರ್ವಶಿಯು ಅಲ್ಲಿಂದಲ್ಲೇ ಭೂರ್ಜ

ಪತ್ರವೊಂದನ್ನು ಸಿದ್ಧಪಡಿಸಿ, ಅದರ ಮೇಲೆ ತನ್ನ ಮನಃಸ್ಥಿತಿಯನ್ನು ವ್ಯಕ್ತ ಪಡಿಸುವ ಶ್ಲೋಕವೊಂದನ್ನು ಬರೆದು, ಅದನ್ನು ರಾಜ ಮತ್ತು ಮಾಣವಕರ ನಡುವೆ ಬೀಳುವಂತೆ ಒಗೆದುಬಿಟ್ಟಳು.

ಮಾಣವಕನಂತೂ ಹೇಳಿಕೇಳಿ ಅಂಜುಬುರುಕ ಹಾರುವನಾದ್ದರಿಂದ ಅಕಸ್ಮಾತ್ತಾಗಿ ಅಲ್ಲಿ ಬಿದ್ದ ಪದಾರ್ಥವು ಹಾವೆಂದು ಭಾವಿಸಿ, ಬೆವರಿ 'ರಾಜನೇ, ಸತ್ತೆನು ! ಸತ್ತೆನು ! ಈ ಹಾವು ನನ್ನನ್ನು ಕಚ್ಚಲು ಬಂದಿದೆ' ಎಂದು ಚೀರಿಕೊಂಡನು.

'ಹುಚ್ಚಾ ! ಅದು ಸರ್ಪವಲ್ಲ. ಭೂರ್ಜಪತ್ರವು. ಅದರಲ್ಲಿ ಏನೋ ಬರೆದಂತಿದೆ.'

'ಹಾಂ ! ಈಗ ತಿಳಿಯಿತು, ನೋಡು. ಅದೃಶ್ಯಳಾಗಿರುವ ಉರ್ವಶಿಯು ನಿನ್ನ ವಿಲಾಪವನ್ನು ಕೇಳಿ ಸೈರಿಸಲಾರದೆ ಅನುರಾಗಸೂಚಕ ವಾಗಿ ಬರೆದು ಕಳುಹಿದ ಭೂರ್ಜಪತ್ರವಿರಬೇಕೆಂದು ನನಗೆನಿಸುತ್ತದೆ.'

'ಮನೋರಥಕ್ಕೆ ಅನ್ಯಮಾರ್ಗವೇ ಇರುವದಿಲ್ಲ. ನಿನ್ನ ತರ್ಕವು ಸರಿಯಾಗಿದೆ.'

'ಅದರಲ್ಲಿ ಬರೆದುದನ್ನು ಕೇಳಲು ನನ್ನ ಮನವು ತೀರ ಉತ್ಕಂಠಿತ ವಾಗಿದೆ.'

ಮಾಣವಕನ ಈ ಮಾತು ಉರ್ವಶಿಗೆ ಬಹಳ ಸಂತೋಷವನ್ನುಂಟು ಮಾಡಿತು. ಅದರಿಂದ ಅವಳು ಸಂತುಷ್ಟಳಾಗಿ 'ಇದರ ಮೇಲಿಂದ ನೋಡು ತ್ತಿರಲಿಕ್ಕೆ ನೀನು ನಿಜವಾಗಿಯೂ ಬಹು ರಸಿಕನಾಗಿರುವಿ' ಎಂದು ಮಾಣ ವಕನನ್ನುದ್ದೇಶಿಸಿ ಮಾತನಾಡಿದಳು.

ಇತ್ತ ರಾಜನು ಆ ಭೂರ್ಜಪತ್ರವನ್ನು ಕೈಯಲ್ಲಿ ತೆಗೆದುಕೊಂಡು ಅದ ರಲ್ಲಿ ಬರೆದ ಕವಿತೆಯನ್ನು ಓದತೊಡಗಿದನು.

ಇದೆಲ್ಲವನ್ನು ಕಂಡ ಉರ್ವಶಿಯು 'ಇನ್ನು ಇವರು ಏನು ಮಾತ ನಾಡಬಲ್ಲರು ?' ಎಂದು ಚಿತ್ರಲೇಖೆಯ ಕಡೆಗೆ ಮುಖ ತಿರುವಿದಳು.

'ಇನ್ನೇನು ಹೇಳಬಲ್ಲರು ? ಕಳೆಗುಂದಿದ ಕಮಲದ ದೇಟಿನಂತಾ ಗಿರುವ ಅವರ ದೇಹಪ್ರಕೃತಿಯೇ ಸಾಕ್ಷಿಯಾಗಿ ನಿಂತಿರುವದು ಕಾಣುವ ದಿಲ್ಲವೇ ?' ಎಂದು ಚಿತ್ರಲೇಖೆಯು ಅವಳ ಸಮಾಧಾನ ಮಾಡಿದಳು.

ಇತ್ತ ಮಾಣವಕನು 'ಓಹೋ! ಒಳಿತಾಯಿತು. ಹಸಿದ ನನಗೆ ಉಂಡಿಯ ಬಾಗಿನವು ಸಿಕ್ಕಂತೆ ನಿನಗೆ ಈ ಭೂರ್ಜಪತ್ರವು ಸಿಕ್ಕಂತಾಯಿತಲ್ಲವೇ ?' ಎಂದನು.

'ಬರೀ ಸಮಾಧಾನವೆಂದೇಕೆನ್ನುವಿ ? ಇಬ್ಬರೂ ಅನ್ಯೋನ್ಯರಾಗಿ ಅನುರಾಗದಿಂದ ಬಂಧಿತವಾಗಿರುವ ಸೂಚ್ಯಾರ್ಥವನ್ನು ಈ ಭೂರ್ಜಪತ್ರವು ಕೊಟ್ಟುಬಿಟ್ಟಿದೆಯಲ್ಲವೇ ? ನನಗಿಷ್ಟುವಾದುದನ್ನೇ ಅವಳು ಈ ಕವಿತೆಯಲ್ಲಿ ಬರೆದುದನ್ನು ನೋಡಿದರೆ, ಅವಳ ಮುಖದತ್ತ ನನ್ನ ಮುಖವನ್ನು ಒಯ್ದಿರುವೆನೋ ಏನೋ ಎಂಬಂತಾಗಿದೆ ನನಗೆ.'

ಉರ್ವಶಿಗೂ ಹಾಗೆಯೇ ಎನಿಸಿರಬೇಕೆಂಬಲ್ಲಿ ಯಾವ ಸಂಶಯವೂ ಇಲ್ಲ. ಯಾಕೆಂದರೆ ಅವರಿಬ್ಬರ ಪ್ರೇಮವು ಅಷ್ಟೊಂದು ಏಕಮಯತೆಯನ್ನು ಹೊಂದಿತ್ತು.

ರಾಜನು ಪ್ರೇಮಾತುರದಿಂದ ಗದ್ಗದಿತನಾದುದರಿಂದ ಅವನ ಮೈ ಬೆವರೊಡೆದಿತ್ತು. ಕೈಯೂ ಬೆವರಿನಿಂದ ತೊಯ್ದು ತಪ್ಪಡಿ ಆಗಿತ್ತು. ಆದ್ದರಿಂದ ಭೂರ್ಜಪತ್ರದಲ್ಲಿರುವ ಅಕ್ಷರಗಳು ತೊಳೆದು ಹೋಗಬಹುದೆಂದು ಬಗೆದು ತನ್ನ ಪ್ರಿಯೆಯ ಇಡುಗಂಟಾದ ಆ ಭೂರ್ಜಪತ್ರವನ್ನು ಮಾಣವಕನ ಕೈಗೆ ಕೊಟ್ಟನು. ಮಾಣವಕನು ಅದನ್ನು ಕೈಯಲ್ಲಿ ತೆಗೆದುಕೊಂಡು 'ನಿನ್ನ ಉರ್ವಶಿಯು ನಿನ್ನ ಮನೋರಥವೆಂಬ ವೃಕ್ಷಕ್ಕೆ ಹೂಬಿಟ್ಟು ಫಲ ಕೊಡದೆ ಎಲ್ಲಿ ಕೈಬಿಟ್ಟು ಹೋಗುವಳೋ-ಏನೋ ?' ಎಂದು ಗೊಣಗಿದನು.

ಉರ್ವಶಿಯು ಈ ಮಾತನ್ನು ಕಿವಿಗೊಟ್ಟು ಕೇಳಿ ಇನ್ನು ಪ್ರತ್ಯಕ್ಷವಾಗಿ ಕಾಣಿಸಿಕೊಳ್ಳದಿರುವದು ಯೋಗ್ಯವಾಗಲಾರದೆಂದು ಭಾವಿಸಿ 'ಮುಂದೆ ಹೋಗಬೇಕೆಂದು ತವಕಬಡುತ್ತಿರುವ ನನ್ನ ಚಂಚಲ ಮನಸನ್ನು ಬಿಗಿಹಿಡಿಯುತ್ತೇನೆ. ನೀನು ಮುಂದೆ ಹೋಗಿ ನನಗೇನು ಬೇಕಾಗಿರುವದೆಂಬದನ್ನು ಅವರಿಗೆ ಶ್ರುತಪಡಿಸು, ಎಂದು ಹೇಳಿದಳು.

ಚಿತ್ರಲೇಖೆಯು ಅವಳ ಸೂಚನೆಯಂತೆ ತಿರಸ್ಕಾರಣೀ ವಿದ್ಯೆಯನ್ನು ತ್ಯಜಿಸಿ, ರಾಜನೆದುರಿಗೆ ಹೋಗಿ 'ರಾಜನಿಗೆ ಜಯ ಜಯಕಾರವಿರಲಿ' ಎಂದಳು.

ರಾಜನು ಯಾವಳ ವಿಷಯದಲ್ಲಿ ಕಾತರನಾಗಿದ್ದನೋ ಅಂಥವಳ ಪ್ರಿಯ ಸಖಿಯಾದ ಚಿತ್ರಲೇಖೆಯು ಸಮ್ಮುಖದಲ್ಲಿ ನಿಂತುದನ್ನು ಕಂಡು, ಆನಂದಭರ

ದಿಂದ ಗೊಂದಲಗೆಟ್ಟನು. ಆದರೂ ಸಾವಧಾನಚಿತ್ತನಾಗಿ ಚಿತ್ರಲೇಖೆಯನ್ನು ಸ್ವಾಗತಿಸಿ 'ಕಲ್ಯಾಣಿಯೇ, ನಿನ್ನ ಸಖಿಯೊಂದಿಗೆ ನೀನು ಈ ಮೊದಲು ನನ್ನ ಕಣ್ಣಿಗೆ ಬಿದ್ದಾಗ ನನಗದೆಷ್ಟು ಆನಂದವಾಗಿತ್ತೋ ಅಷ್ಟು ಆನಂದವು ಈಗ ಆಗಲಾರದಾಗಿದೆ. ಯಾಕೆಂದರೆ ನೀನು ನಿನ್ನ ಸಖಿಯನ್ನು ಬಿಟ್ಟು ಒಬ್ಬಳೇ ಬಂದಿರುವಿ. ಗಂಗೆಯನ್ನು ಬಿಟ್ಟು ಯಮುನೆಯು ಹೇಗೆ ಆನಂದಕಾರಕಳಾಗಿ ಕಾಣುವದಿಲ್ಲವೋ ಹಾಗೆ ನೀನು ನನಗೆ ಕಾಣುತ್ತಿರುವಿ' ಎಂದು ತನ್ನ ಮನದ ಳಲನ್ನು ತೋಡಿಕೊಂಡನು.

'ತಾವು ಆತುರಪಟ್ಟು ಗಾಬರಿಯಾಗಬೇಡಿರಿ. ಮೊದಲು ಮೇಘಪಂಕ್ತಿಗಳು ಕಾಣುತ್ತವೆ. ಆಮೇಲೆ ವಿದ್ಯುಲ್ಲತೆಯು ಕಣ್ಣಿಗೆ ಬೀಳುತ್ತದೆ, ಎಂದು ಚಿತ್ರಲೇಖೆಯು ಸಮಾಧಾನವನ್ನು ಹೇಳಿದಳು.

ಮಾಣವಕನು ಇವಳೇ ಉರ್ವಶಿಯೆಂದು ಬಗೆದಿದ್ದನು. ರಾಜನ ಮಾತನ್ನು ಕೇಳಿ ಇವಳು ಉರ್ವಶಿಯ ದಾಸಿಯೆಂದು ನಿರ್ಧರಿಸಿಕೊಂಡನು. ರಾಜನು ಅಲ್ಲಿಯೇ ಇದ್ದ ಶಿಲಾಸನವನ್ನು ತೋರಿಸಿ ಅವಳಿಗೆ ಕುಳಿತುಕೊಳ್ಳಲು ಸಂಜ್ಞೆಮಾಡಿದನು. ಮೂವರೂ ಕುಳಿತು ಕೊಂಡರು.

'ಮಹಾರಾಜರೇ, ಉರ್ವಶಿಯು ತಮಗೆ ಶಿರಸಾಷ್ಟಾಂಗ ನಮಸ್ಕಾರ ಮಾಡಿ ಬಿನ್ನವಿಸಿಕೊಂಡಿದ್ದಾಳೆ. ಏ....ನೆಂ....ದ....ರೆ'

'ಬಿನ್ನಹವಲ್ಲ. ಆಜ್ಞೆ. ಏನಿದೆ ಅವಳಾಜ್ಞೆ?'

'-ಏನೆಂದರೆ- ಕೇಶಿದೈತ್ಯನು ನನ್ನ ಮೇಲೆ ದೊಡ್ಡ ಸಂಕಟವನ್ನೊಡ್ಡಿದ್ದನು. ಆ ಹೊತ್ತಿನಲ್ಲಿ ನೀವು ನನ್ನನ್ನು ರಕ್ಷಿಸಿದಿರಿ. ಅಂದಿನ ನಿಮ್ಮ ಮುಖಾವಲೋಕನದಿಂದ ಮಾರುಹೋಗಿ, ಮದನನಿಂದ ಬಹಳೇ ಪೀಡಿತಳಾಗಿದ್ದೇನೆ. ಈಗ ಮತ್ತೆ ಮಹಾರಾಜರ ದಯಕ್ಕೆ ಪಾತ್ರಳಾಗಬೇಕೆಂದು ಬಂದಿದ್ದೇನೆ.—ಎಂದು.'

'ನಿನ್ನ ಸಖಿಯು ಅತ್ಯಂತ ಉತ್ಸುಕಳಾಗಿರುವಳೆಂದು ಹೇಳುತ್ತಿರುವಿ; ಆದರೆ ಈ ಪುರೂರವನೂ ಅವಳಿಗಾಗಿ ಎಷ್ಟೊಂದು ಪರಿತಾಪಪಡುತ್ತಿರುತ್ತಾನೆಂಬುದರ ಅರಿವೇ ಅವಳಿಗೆ ಇದ್ದಂತಿಲ್ಲ. ಅವಳು ನನ್ನನ್ನೂ, ನಾನು ಅವಳನ್ನೂ ಪಡೆಯಬೇಕೆಂದು ಚಿಂತಿಸುತ್ತಿದ್ದೇವೆ. ಆದಕಾರಣ ಪ್ರಯತ್ನ ಮಾಡಿ ಅವಳ ಸಮಾಗಮವನ್ನು ಸಾಧಿಸಿಕೊಡು'—ಎಂದು ಉರ್ವಶಿಯಂತೆ

ತನ್ನದೂ ಪ್ರಾರ್ಥನೆ ಇರುವದೆಂದು ತಿಳಿಸಿದನು. ಅದನ್ನು ಕೇಳಿ ಚಿತ್ರಲೇಖೆಯು ಊರ್ವಶಿಯ ಬಳಿಗೆ ಬಂದು 'ಮದನನು ಭಯಂಕರನಿರುತ್ತಾನೆ. ಆದಕಾರಣ ನಾನೀಗ ನಿನ್ನ ಪ್ರಿಯತಮನ ದೂತಿಯಾಗಿ ನಿನ್ನ ಕಡೆಗೆ ಬಂದಿದ್ದೇನೆ' ಎಂದು ಸೂಕ್ಷ್ಮವಾಗಿ ಸೂಚ್ಯವಾಗಿ ತನ್ನ ಸ್ಪಷ್ಟ ಅಭಿಪ್ರಾಯವನ್ನು ಪ್ರಕಟಗೊಳಿಸಿಯೇ ಬಿಟ್ಟಳು.

ತಿರಸ್ಕಾರಣೀ ವಿದ್ಯೆಯನ್ನು ತ್ಯಜಿಸಿ ಊರ್ವಶಿಯೂ ಪ್ರಕಟವಾಗಿ 'ಚಿತ್ರಲೇಖೆಯೇ, ನೀನು ಬಹಳ ಅವ್ಯವಸ್ಥಿತಳಾಗಿರುವಿ. ಎಷ್ಟು ಬೇಗನೇ ನನ್ನನ್ನು ಬಿಟ್ಟುಹೋದಿಯಲ್ಲ!' ಎನ್ನಲಾಗಿ, ಚಿತ್ರಲೇಖೆಯು ನಗುತ್ತ 'ಇನ್ನೊಂದು ಗಳಿಗೆಯೊಳಗಾಗಿಯೇ ಯಾರು ಯಾರನ್ನು ಬಿಟ್ಟು ಹೋಗುತ್ತಾರೋ ಎಂಬದನ್ನು ನೀನೇ ನೋಡುವಿ ನೀನು ಮಾತ್ರ ನಿನ್ನ ಮೊದಲಿನ ಸ್ಫುರದ್ರೂಪವನ್ನು ಧಾರಣಮಾಡು' ಎಂದು ಬೇಡಿಕೊಂಡಳು.

ಊರ್ವಶಿಯು ದೇವಲೋಕದ ವೇಶ್ಯೆಯು. ವೇಶ್ಯೆಗೆ ಗುರುತು ಪರಿಚಯವಿಲ್ಲದ ಪುರುಷನ ಬಳಿಗೆ ಹೋಗಲು ಯಾವ ಭಯವೂ ಬರುವದಿಲ್ಲ. ಆದರೂ ಊರ್ವಶಿಯು ಸದ್ಯಕ್ಕೆ ತನ್ನ ವೇಶ್ಯೆಯ ನಡವಳಿಕೆಯ ವಿರುದ್ಧವಾಗಿ ವರ್ತಿಸುತ್ತಿದ್ದಳು. ವೇಶ್ಯೆಯು ಒಬ್ಬನೇ ಪುರುಷನಲ್ಲಿ ತನ್ನ ಮನಸ್ಸನ್ನಿಟ್ಟು ಆಸಕ್ತಳಾಗಿರುವದು ತಕ್ಕುದಲ್ಲ. ಆದರೆ ಇವಳು ಹಾಗೆ ಮಾಡದೆ ರಾಜನಲ್ಲಿ ಅತಿಶಯವಾಗಿ ಆಸಕ್ತಿವಹಿಸಿಬಿಟ್ಟಿದ್ದಳು. ಪ್ರೇಮಾತಿಶಯದಮೂಲಕ ಅವಳಲ್ಲಿ ಸಾತ್ವಿಕಭಾವನೆಯ ಗಾಳಿಯು ಸ್ವಲ್ಪ ಬಡಿದು ರಾಜನ ಸಾನ್ನಿಧ್ಯಕ್ಕೆ ಹೋಗಬೇಕೆನ್ನುವಾಗ ಲಜ್ಜಿತಳೂ ಭಯಭೀತಳೂ ಆದಳು. ಇಂಥ ಅವಸ್ಥೆಯಲ್ಲಿಯೂ ಅವಳು ತಡವರಿಸುತ್ತ 'ರಾಜನಿಗೆ ಜಯ ಜಯಕಾರವಿರಲಿ!' ಎಂದೆನ್ನುತ್ತ ರಾಜನ ಸಮೀಪಕ್ಕೆ ತೆರಳಿದಳು.

ರಾಜನು ಅವಳನ್ನು ನೋಡಿದೊಡನೆಯೆ ಅತ್ಯಾನಂದ ಪಟ್ಟು ಅವಳ ಹತ್ತಿರಕ್ಕೆ ಹೋಗಿ 'ಸುಂದರಿಯೇ, ನಿನ್ನ ಮುಖದಿಂದ ಈ ಜಯ ಜಯಕಾರ ಶಬ್ದವನ್ನು ಕೇಳುವದಕ್ಕಿಂತ ಮೊದಲು ಈ ಶಬ್ದವು ಇಂದ್ರನಿಗಷ್ಟೇ ಅನ್ವಯಿಸುತ್ತದೆಂದು ಭಾವಿಸಿದ್ದೆನು. ಆದರೆ ಈಗ ಅವನನ್ನು ಬಿಟ್ಟು ನನಗೆ ಜಯವಾಗಲಿ ಎಂಬುದರ ಅರ್ಥವನ್ನು ನಾನು ಗ್ರಹಿಸಿದ್ದೇನೆ' ಎಂದೆನ್ನುತ್ತ ಅವಳ ಕೋಮಲ ಕರಗಳನ್ನು ಹಿಡಿದು, ತನ್ನ ಆಸನದಲ್ಲಿ ಕುಳ್ಳಿರಿಸಿಕೊಂಡನು.

ಪಾಪ! ಮಾಣವಕನು ಅಲ್ಲಿ ತೆಪ್ಪಗೆ ಕುಳಿತಿದ್ದನು. ಅವನನ್ನು ಯಾರೂ ವಿಚಾರಿಸಲೇ ಇಲ್ಲ; ನಮಸ್ಕಾರವನ್ನೂ ಮಾಡಲಿಲ್ಲ. ಆದುದರಿಂದ ಮಾಣವಕನು ಬಾಯಿಮುಚ್ಚಿಕೊಂಡಿರಲಾರದೆ 'ರಾಜನೇ, ನಿನ್ನ ರಾಜ್ಯದಲ್ಲಿ ಏನೇನು ನಡೆಯುತ್ತಿದೆಯೋ ಯಾರಿಗೆ ಗೊತ್ತು! ನಿನ್ನ ಜೀವಶ್ಚ ಕಂಠಶ್ಚ ಮಿತ್ರನೂ ಬ್ರಾಹ್ಮಣನೂ ಆದ ನನಗೆ ಒಂದು ನಮಸ್ಕಾರವಾದರೂ ಸಿಗಬಾರದೆಂದರೇನು? ಎಷ್ಟು ಚಮತ್ಕಾರವಾಗಿದೆ ನೋಡು!' ಎಂದು ನಿಟ್ಟುಸಿರು ಬಿಟ್ಟನು.

ಮಾಣವಕನ ಮಾತಿನ ಮೊನೆಯನ್ನು ಚಾಣಾಕ್ಷಳಾದ ಊರ್ವಶಿಯು ತಿಳಿದುಕೊಂಡು ಮುಗುಳುನಗೆಯನ್ನು ಬೀರುತ್ತ ಮಾಣವಕನ ಕಾಲಿಗೆರಗಿದಳು. ಅದರಿಂದ ಅವನು ಸಂತುಷ್ಟನಾಗಿ 'ನಿನಗೆ ಕಲ್ಯಾಣವಾಗಲಿ' ಎಂದು ಅವಳಿಗೆ ಆಶೀರ್ವಾದ ಮಾಡಿದನು.

ಊರ್ವಶಿಯ ಪ್ರಥಮ ದರ್ಶನಾರಭ್ಯ ವಿರಹಾಗ್ನಿಯಿಂದ ಬೆಂದು ಬೇಗುದಿಗೊಂಡ ರಾಜನಿಗೆ ಈಗ ಅವಳ ಸಾನ್ನಿಧ್ಯ ಸಂಪರ್ಕದಿಂದ ಅವನ ಜೀವವು ಚೇತನಗೊಂಡಿತು. ಎಲ್ಲರೂ ತಂತಮ್ಮ ಆಸನದಲ್ಲಿ ಮಂಡಿತರಾಗಿದ್ದರು. ಇನ್ನೇನಾದರೂ ಮಾತಿನ ಸಂದರ್ಭವು ಉಂಟಾಗುವದಿತ್ತು. ಅಷ್ಟರೊಳಗೇ ಆ ಪ್ರಣಯ ಕುತೂಹಲಿಗಳ ಕೇಲಿಗೆ ಆಕಸ್ಮಾತ್ತಾಗಿ ಒಂದು ವಿಘ್ನವು ಉಪಸ್ಥಿತವಾಯಿತು.

ಸ್ವರ್ಗಲೋಕದಲ್ಲಿ ದೇವತೆಗಳ ನಾಟ್ಯಾಚಾರ್ಯನಾದ ಭರತಮುನಿಯು 'ಶ್ರೀ ಲಕ್ಷ್ಮೀ ಸ್ವಯಂವರ'ವೆಂಬ ನಾಟಕವನ್ನು ರಚಿಸಿ, ಅದನ್ನು ದೇವತೆಗಳ ಸಭೆಯಲ್ಲಿ ಪಾತ್ರಗಳ ಮುಖಾಂತರ ಪ್ರಯೋಗವನ್ನು ಮಾಡಿತೋರಿಸಬೇಕೆಂಬ ಉದ್ದೇಶವನ್ನಿಟ್ಟುಕೊಂಡು ಅವನು ಊರ್ವಶಿ ಮೊದಲಾದ ಅಪ್ಸರೆಯರಿಗೆ ಕಲಿಸಿ ಸಿದ್ಧಗೊಳಿಸಿದ್ದನು. ಅಂದೇ ಅದರ ರಂಗತಾಲೀಮನ್ನು ನೋಡಬೇಕೆಂದು ಅವನು ಆ ನಾಟಕವಲ್ಲಿ ಪಾತ್ರವಹಿಸಿದ ನಟವರ್ಗದವರನ್ನೆಲ್ಲ ಕರೆಕಳುಹಿದ್ದನು. ಊರ್ವಶಿ ಹಾಗೂ ಚಿತ್ರಲೇಖೆಯ ಇಬ್ಬರ ಹೊರತಾಗಿ ಉಳಿದವರೆಲ್ಲರೂ ಬಂದಿದ್ದರು. ಆಗ ಭರತಮುನಿಯು ಅವರಿಬ್ಬರನ್ನು ಹುಡುಕುವದಕ್ಕಾಗಿ ಇಂದ್ರನ ಕಡೆಗೆ ದೂರು ಒಯ್ಯಲಾಗಿ, ಅವನು ಒಬ್ಬ ದೂತನನ್ನು ಕಳುಹಿದನು.

ಆ ದೂತನು ನೇರವಾಗಿ ಉರ್ವಶಿಯು ಕುಳಿತ ಸ್ಥಳಕ್ಕೆ ಬಂದು, 'ಚಿತ್ರಲೇಖೆಯೇ, ನಿನ್ನ ಸಖಿಯಾದ ಉರ್ವಶಿಯನ್ನು ಕರೆದುಕೊಂಡು ಬೇಗನೆ ನಡೆ. ಯಾಕೆಂದರೆ ಭರತಮುನಿಯು ನಿಮಗೆ ಕಲಿಸಿದ ನಾಟಕದ ಪ್ರಯೋಗವನ್ನು ಇಂದ್ರಾದಿ ದೇವತೆಗಳು ನೋಡಬೇಕೆಂದು ಅಪೇಕ್ಷಿಸುತ್ತಾರೆ' ಎಂದು ಬಿನ್ನಹಮಾಡಿಕೊಂಡನು. ದೇವದೂತನು ಎಲ್ಲರಿಗೂ ಕಾಣಿಸದಿದ್ದರೂ ಅವನ ಮಾತುಗಳು ಎಲ್ಲರಿಗೂ ಕೇಳಿಸಿದವು. ಈ ಪ್ರಸಂಗವನ್ನು ಕಂಡು ಉರ್ವಶಿಯು ಬಲು ದುಃಖಿತಳಾಗಿ 'ನನ್ನ ಬಾಯಿಂದ ಮಾತುಗಳೇ ಹೊರಡಲಾರವು' ಎಂದಳು.

ಚತುರಳಾದ ಚಿತ್ರಲೇಖೆಯು ಉರ್ವಶಿಯ ಪರವಾಗಿ 'ಮಹಾರಾಜರೇ, ನಾವಂತೂ ಪರಾಧೀನರು. ಮಹಾರಾಜರು ಈಗ ಅಜ್ಞೆಯನ್ನು ಕೊಟ್ಟರೆ, ದೇವತೆಗಳ ರಾಜನಾದ ಭಗವಾನ್ ಇಂದ್ರನಿಗೆ ನಾವು ಅಪರಾಧಿಗಳಾಗುವದಿಲ್ಲ. ಅಷ್ಟು ದಯಪಾಲಿಸಬೇಕೆಂದು ಬೇಡಿಕೊಳ್ಳುತ್ತೇನೆ' ಎಂದು ಮಾತುಗಳನ್ನಾಡಿದಳು.

ದುಃಖದಿಂದ ಎಷ್ಟೋ ದಿನಗಳು ಕಳೆದ ನಂತರ ರಾಜನಿಗೆ ಅವಳ ಸಂದರ್ಶನವಾಗಿತ್ತು; ಒಂದೆರಡು ಮಾತುಗಳನ್ನಾದರೂ ಇನ್ನೂ ಆಡಿರಲಿಲ್ಲ. ಇಂಥ ಪರಿಸ್ಥಿತಿಯಲ್ಲಿ ರಾಜನು ಅವಳಿಗೆ ಹೋಗಲು ಅನುಮತಿಯನ್ನು ಹೇಗೆ ಕೊಟ್ಟಾನು! ಕುತ್ತಿಗೆಯ ಶಿರಗಳು ಉಬ್ಬಿಬಂದುದರಿಂದ ಅವನ ಬಾಯಿಯಿಂದ ಮಾತುಗಳೇ ಹೊರಡಲಿಲ್ಲ. ಆದರೆ ಹೊತ್ತೇ ಹಾಗೆ ಬಂದಿದೆ ಎಂದಮೇಲೆ ಮಾಡುತ್ತಾನೇನು? ಹೇಗೋ ಸಮಾಧಾನವನ್ನು ತಂದುಕೊಂಡು 'ನಿಮ್ಮ ಒಡೆಯನ ಆಜ್ಞೆಯಂತೆ ವರ್ತಿಸಲು ನಾನೇನು ಅಡ್ಡಬರುವದಿಲ್ಲ. ನನ್ನ ನೆನಪನ್ನು ಮಾತ್ರ ಮರೆಯಬಾರದು' ಎಂದು ಹೇಳಿದನು.

ಪರಸ್ಪರರಲ್ಲಿ ಅನುರಾಗದಿಂದ ಆಸಕ್ತರಾಗಿರುವ ಸ್ತ್ರೀಪುರುಷರಿಗೆ ದುರ್ದೈವದಿಂದ ವಿಯೋಗವಾಗುವ ಸಂದರ್ಭವುಂಟಾದರೆ ಯಾರ ಮುಖದಿಂದಲೂ ಮಾತುಗಳು ಹೊರಡುವದಿಲ್ಲ. ಅದರಂತೆ ಉರ್ವಶಿ-ಪುರೂರವರ ಬಾಯಿಯಿಂದ ಮಾತುಗಳೇ ಹೊರಡಲಿಲ್ಲ. ಉರ್ವಶಿಯ ಮುಖಮುದ್ರೆಯ ಮೇಲಿಂದ ಅವಳಿಗೆ ದುಃಖವು ಅತಿಯಾಗಿತ್ತೆಂದು ಕಾಣಬರುತ್ತಿತ್ತು. ಇಂಥ ವಿಪನ್ನಾವಸ್ಥೆಯಲ್ಲಿ ರಾಜನನ್ನು ನೆಟ್ಟ ನೋಟದಿಂದ ನೋಡುತ್ತ ಚಿತ್ರಲೇಖೆ

ಯೊಡನೆ ವಿಮಾನಾರೂಢಳಾಗಿ ಹೊರಟುಬಿಟ್ಟಳು. ಇತ್ತ ರಾಜನು ವ್ಯಾಕುಲಚಿತ್ತನಾಗಿ 'ಕಣ್ಣುಗಳಿದ್ದೂ ಈಗ ನಾನು ಕುರುಡನಾಗಿದ್ದೇನೆ' ಎಂದು ದೀರ್ಘಶ್ವಾಸವನ್ನು ಬಿಟ್ಟನು. ಮಾಣವಕನು ರಾಜನಿಗೆ ಸಮಾಧಾನವುಂಟಾಗಲೆಂದು ಆ ಭೂರ್ಜಪತ್ರವನ್ನು ನೋಡತೊಡಗಿದನು. ಆದರೆ ಅದು ಗಾಳಿಗೆ ಎತ್ತೋ ಹಾರಿಹೋಗಿಬಿಟ್ಟಿತ್ತು. ಅದು ಅವನ ಕಣ್ಣಿಗೆ ಬೀಳಲೇ ಇಲ್ಲ. ಆಗ ಅವನು ಏನೂ ತೋಚದವನಾಗಿ 'ನನ್ನ ಭೂರ್ಜಪತ್ರ—' ಎಂದು ಅರ್ಧಕ್ಕೆ ನಿಂತು, ಮನಸಿನಲ್ಲಿ 'ಅಯ್ಯೋ! ಉರ್ವಶಿಯ ದರ್ಶನದಲ್ಲಿ ನಿಮಗ್ನನಾದ ನನ್ನ ಕೈಯಲ್ಲಿದ್ದ ಭೂರ್ಜಪತ್ರವು ಹೇಗೆ ಹಾರಿಹೋಯಿತೋ ಏನೋ— ನನಗೆ ಗೊತ್ತಾಗಲಿಲ್ಲವಲ್ಲ' ಎಂದುಕೊಂಡನು.

ಮಾಣವಕನು ಅರ್ಧ ಮಾತಿಗೆ ನಿಂತಾಗ ರಾಜನು 'ಏ ಮಾಣವಕಾ, ನಿನ್ನ ಮನಸಿನಲ್ಲಿ ಏನು ಹೇಳುವದಿದೆ; ಪೂರಾ ಹೇಳು' ಎಂದು ವಿಚಾರಿಸಿದನು.

ಭೂರ್ಜಪತ್ರವು ಹಾರಿಹೋಯಿತೆಂಬುದರ ನೆನಪನ್ನೂ ಸಹ ತೆಗೆಯಕೂಡದೆಂದು ನಿಶ್ಚಯಿಸಿ ಮಾಣವಕನು 'ರಾಜನೇ, ನೀನು ಹೀಗೆ ಅಸ್ವಸ್ಥಚಿತ್ತನಾಗಿ ಅಸ್ತವ್ಯಸ್ತವಾಗಿ ಹೊರಳಾಡಬೇಡ. ಉರ್ವಶಿಯ ಮನಸು ನಿನ್ನಲ್ಲಿ ದೃಢವಾಗಿ ನಟ್ಟುಹೋಗಿದೆ. ಒಂದುವೇಳೆ ಅವಳು ಈಗ ಕೈಬಿಟ್ಟುಹೋಗಿದ್ದರೂ ಗಾಢವಾದ ಸ್ನೇಹಬಂಧನವನ್ನು ಕಡಮೆ ಮಾಡಲಾರಳು! ಎಂದು ಹೇಳುವದಿತ್ತು ನನ್ನ ಮನಸಿನಲ್ಲಿ' ಎಂದು ರಾಜನಿಗೆ ಉತ್ತರವನ್ನಿತ್ತನು.

'ನನ್ನ ಮನಸಿಗೂ ಹಾಗೆಯೇ ಎನಿಸುತ್ತದೆ. ಯಾಕೆಂದರೆ ಅವಳು ಇಂದ್ರನ ವಶದಲ್ಲಿರುವವಳು. ಅದರಿಂದ ಶರೀರವನ್ನು ನನ್ನ ವಶಕ್ಕೊಪ್ಪಿಸುವದು ಅಶಕ್ಯವಾದ ಮಾತು. ಆದರೂ ತನ್ನ ಅಧಿಕಾರದಲ್ಲಿರುವ ಹೃದಯ, ಮನಸುಗಳೆರಡನ್ನೂ ನನ್ನ ಸ್ವಾಧೀನಪಡಿಸಿ ಹೋಗಿದ್ದಾಳೆ.'

'ಯಾವಾಗ ಭೂರ್ಜಪತ್ರದ ನೆನಪನ್ನು ತೆಗೆಯುವನೋ ಏನೋ ಎಂದು ನನ್ನ ಮನಸಿನಲ್ಲಿ ಕಟಿಯುತ್ತಿರುತ್ತದೆ. ಅವನಿಗೆ ನೆನಪಾಗದಿದ್ದರೇ ಒಳಿತು' ಎಂದು ಮಾಣವಕನು ಮನಸಿನಲ್ಲಿಯೇ ಚಿಂತಿಸುವಷ್ಟರಲ್ಲಿ ರಾಜನಿಗೆ ಭೂರ್ಜಪತ್ರದ ನೆನಪಾಗಿಯೇ ಬಿಟ್ಟಿತು.

' ಉದಾಸೀನದಿಂದ ನಿರುತ್ಸಾಹಗೊಂಡ ಮನಸನ್ನು ಯಾವ ಉಪಾಯ ದಿಂದ ಸಮಾಧಾನಪಡಿಸಿಕೊಳ್ಳಬೇಕು ? ಉರ್ವಶಿಯು ಬರೆಹವಿದ್ದ ಆ ಭೂರ್ಜಪತ್ರವನ್ನಾದರೂ ಇತ್ತ ಕೊಡು, ನೋಡೋಣ. '

ಭೂರ್ಜಪತ್ರವು ಹಾರಿಹೋದುದು ತನಗೆ ಗೊತ್ತಿದ್ದರೂ ಮಾಣವಕನು ರಾಜನ ಕಣ್ಣಿಗೆ ಬೀಳುವಂತೆ ಅದನ್ನು ಅಲ್ಲಲ್ಲಿ ಹುಡುಕಾಡತೊಡಗಿದನು. ಅದು ದೊರೆಯದಿದ್ದುದರಿಂದ ಮಾಣವಕನು ದುಃಖಿತನಾಗಿ ' ಅದು ಸಿಗಲೊಲ್ಲದು; ಆ ಭೂರ್ಜಪತ್ರವು ದಿವ್ಯವಾಗಿತ್ತಂತೇ ಉರ್ವಶಿಯೊಂದಿಗೆ ಹೊರಟುಹೋಗಿರಬೇಕು ' ಎಂದನು.

ಅದನ್ನು ಕೇಳಿ ರಾಜನು ತಿರಸ್ಕಾರಪೂರ್ವಕವಾಗಿ ' ಮೂರ್ಖನೇ, ಪ್ರಸಂಗದ ಪರಿವೆಯಿಲ್ಲದೆ ಪ್ರತಿಯೊಂದು ಮಾತಿಗೆ ನಿನಗೆ ಚೇಷ್ಟೆಯೆ ? ' ಎಂದನು.

'ಹೀಗೆ ಸಿಟ್ಟಾಗಬಾರದು. ಎಲ್ಲಿ ಹೋಗಿದೆಯೋ ಏನೋ ಶೋಧ ಮಾಡುತ್ತೇನೆ' ಎಂದಂದನು. ಅತ್ತಕಡೆಗೆ, ಇತ್ತಕಡೆಗೆ ಹುಡುಕಾಡಿದಂತೆ ನಟಿಸಿದನು. ಇತ್ತ ಹೀಗೆ ನಡೆದಿರುವಾಗ ಅತ್ತ ಅಂತಃಪುರದಲ್ಲಿ ರಾಜನಿಗೆ ಶರೀರ ಸ್ವಾಸ್ಥ್ಯವಿಲ್ಲೆಂಬ ಸುದ್ದಿಯನ್ನು ಕೇಳಿ ವಸುಮತಿರಾಣಿಯು ನಿಪುಣಿಕೆ ದಾಸಿಯೊಡನೆ ಅವನ ಸಮಾಚಾರವನ್ನು ತಿಳಿದುಕೊಳ್ಳಲು ಹೊರಟಳು. ರಾಜನು ಮಾಣವಕನ ಕೂಡ ಪ್ರಮದವನದಲ್ಲಿರುವನೆಂಬ ವರ್ತಮಾನವನ್ನು ನಿಪುಣಿಕೆಯು ರಾಣಿಗೆ ತಿಳಿಸಿದಳು. ಅದರಿಂದ ರಾಣಿಯು ನೇರವಾಗಿ ಆ ಪ್ರಮದವನಕ್ಕೇ ಹೋಗಬೇಕೆಂದಳು.

'ನಿಜವಾಗಿಯೋ ಅವರು ಪ್ರಮದವನದಲ್ಲಿರುವರೇನ? ' ಎಂದು ರಾಣಿಯು ಪುನಃ ವಿಚಾರಿಸದೆ ಬಿಡಲಿಲ್ಲ.

'ನಾನೆಂದಾದರೂ ನಿಮಗೆ ಸುಳ್ಳು ಸುದ್ದಿಯನ್ನು ಹೇಳಿರುವೆನೇ? '

'ಹಾಗಿದ್ದರೆ ಪ್ರಮದವನದಲ್ಲಿರುವ ಮಲ್ಲಿಗೆಯ ಮಂಟಪದ ಸಮೀಪಕ್ಕೆ ಹೋಗಿ ಅಡಗಿಕೊಂಡು ಕುಳಿತು ಅವರಿಬ್ಬರೂ ಏನೇನು ಮಾತಾಡುತ್ತಿರುವರೆಂಬದನ್ನು ಕೇಳಲು ನಿಂತುಕೊಳ್ಳುತ್ತೇನೆ. '

'ರಾಣಿಯವರ ಮನಸಿಗೆ ಬಂದಂತಾಗಲಿ. ಅದೋ ಆ ಮಂಟಪವು ಇಲ್ಲಿಯೇ ಸಮೀಪದಲ್ಲಿ ಕಾಣುತ್ತಿದೆ. '

ಆ ಭೂರ್ಜಪತ್ರವಂತೂ ಹಾರಿ ಹೋಗಿದೆಯೆಂದು ಈ ಮೊದಲು ಹೇಳಿದ್ದಾಗಿದೆ. ಅದು ಹಾರುತ್ತ ಹಾರುತ್ತ ಬಹುದೂರ ಹೋಗಿತ್ತು. ರಾಣಿಯು ಬರುವ ದಾರಿಯಲ್ಲಿ ಬಿದ್ದುದರಿಂದ ಅದು ಸಹಜವಾಗಿ ರಾಣಿಯ ದೃಷ್ಟಿಗೆ ಬಿದ್ದಿತು.

'ತೆಂಕಣಗಾಳಿಯಿಂದ ಏನೋ ತೂರಿಬರುತ್ತಿದೆ. ಅದೇನಿರಬಹುದು ? ಹೊಸ ಅರಿವೆಯಂತೆ ಕಾಣುತ್ತಿದೆಯಲ್ಲ ! '

'ಅದು ಗಾಳಿಯಿಂದ ಹೊಡಮುಳ್ಳಿತು. ಅದರ ಮೇಲೆ ಅಕ್ಷರಗಳು ಕಾಣುತ್ತಿವೆ. ಓಹೋ ! ಅದು ಭೂರ್ಜಪತ್ರ ! ಭೂರ್ಜಪತ್ರ !' ಎಂದು ನಿಪುಣಿಕೆಯು ಹೇಳುತ್ತಿರುವಷ್ಟರಲ್ಲಿ ಅದು ರಾಣಿಯ ಕಾಲಂದುಗೆಗಳಿಗೆ ತೊಡರಿಕೊಂಡಿತು. ನಿಪುಣಿಕೆಯು ಅದನ್ನು ಕೂಡಲೆ ಕೈಯಲ್ಲಿ ತೆಗೆದು ಕೊಂಡು ರಾಣಿಯ ಕೈಗೆ ಕೊಟ್ಟು, ಅದನ್ನು ಓದಿನೋಡಬೇಕೆಂದು ಬಿನ್ನವಿಸಿ ಕೊಂಡಳು.

ರಾಣಿಯು ಓದಬಹುದಾಗಿದ್ದಿತು. ಆದರೆ ಅದು ಶೃಂಗಾರ-ಗಿಂಗಾರ ದ್ದಿರಬೇಕೆಂದು ಭಾವಿಸಿ ಅದನ್ನು ನಿಪುಣಿಕೆಯ ಕೈಯಲ್ಲಿ ಕೊಟ್ಟು 'ನೀನೇ ಓದು. ಏನಾದರೂ ಅಸಹ್ಯ-ಪಸಹ್ಯವಿರದಿದ್ದರೆ ನಾನು ಕೇಳುತ್ತೇನೆ ' ಎಂದು ರಾಣಿಯು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದಳು.

ನಿಪುಣಿಕೆಯು ಅದನ್ನೋದಿ 'ರಾಣಿಯವರೇ, ಅದೇ ಸುದ್ದಿ ಇದ ರಲ್ಲಿರುವದು. ತಮ್ಮ ಕಿವಿಯ ಮೇಲೆ ಯಾವ ಮಾತುಗಳು ಬಿದ್ದಿರುವವೋ ಅವೇ ಮಾತುಗಳು ಇದರಲ್ಲಿವೆ. ಮಹಾರಾಜರನ್ನುದ್ದೇಶಿಸಿ ಉರ್ವಶಿಯು ಕವನವನ್ನು ರಚಿಸಿ, ಕಳಿಸಿಕೊಟ್ಟಿದ್ದಾಳೆಂದು ತೋರುತ್ತದೆ. ಬಹುತರವಾಗಿ ಇದು ನಮ್ಮ ಕೈಗೆ ಬೀಳತಕ್ಕದ್ದಲ್ಲ. ಆದರೂ ಮಾಣವಕನ ಉಲಕೋಚಿ ಸ್ವಭಾವದ ಮೂಲಕ ಅದು ನಮಗೆ ಸಿಕ್ಕಿದೆ' ಎಂದು ಹೇಳಿದಳು.

'ಅದರಲ್ಲಿರುವ ಇಂಗಿತವನ್ನರಿತೋ ?' ಎಂದು ರಾಣಿಯು ವಿಚಾರಿಸ ಲಾಗಿ ನಿಪುಣಿಕೆಯು ಅದರಲ್ಲಿರುವ ಶ್ಲೋಕವನ್ನೇ ಓದಿತೋರಿಸಿದಳು.

'ಅಪ್ಸರೆಯನ್ನು ಇಚ್ಛಿಸಿದ ರಾಜನ ದರ್ಶನವನ್ನು ಈ ಪತ್ರದ ನೆವ ವನ್ನು ಮುಂದೆ ಮಾಡಿಕೊಂಡು ತೆಗೆದುಕೊಳ್ಳೋಣ ' ಎಂದು ನಿಪುಣಿಕೆಗೆ

ಹೇಳಿ, ರಾಣಿಯು ಆ ಪತ್ರವನ್ನು ಕೈಯಲ್ಲಿ ಹಿಡಿದುಕೊಂಡೇ ರಾಜನ ಸಾನ್ನಿಧ್ಯಕ್ಕೆ ತೆರಳಿದಳು.

ಆಗ ರಾಜನು ಭೂರ್ಜಪತ್ರದ ನೆನಪನ್ನು ಮೇಲಿಂದ ಮೇಲೆ ಮಾಡಿ ಕೊಳ್ಳುತ್ತಿದ್ದನು. ಮಾಣವಕನೇ ಅದನ್ನು ಕಳೆದಿರುವನೆಂದು ಅವನ ಮೇಲೆ ಸಿಟ್ಟೂ ಆಗಿದ್ದನು. ಅಷ್ಟರೊಳಗೆ ತೆಂಕಣದ ಆಲ್ಹಾದಕರವಾದ ಸುಳಿಗಾಳಿಯು ಬೀಸಹತ್ತಿದ್ದನ್ನು ಕಂಡು ಭೂರ್ಜಪತ್ರದ ಸ್ಮರಣೆ ಹಾರಲೆಂದು ಬಗೆದು ಮಾಣವಕನು ' ಈ ಗಾಳಿಯು ವೇಗದಿಂದ ಚಲಿಸುವ ಈ ಪ್ರಮದವನದಲ್ಲಿ ರುವ ಕ್ರೀಡಾಪರ್ವತದ ಅಕ್ಕಪಕ್ಕದಲ್ಲಿ ಅದೇನೋ ಕಾಣುತ್ತಿರುವದು, ನೋಡು ' ಎಂದನು.

' ಮಲಯಮಾರುತನೇ, ಈ ಹೊತ್ತಿನಲ್ಲಿ ನನ್ನ ಮೇಲೆ ಕೃಪೆಯನ್ನು ತೋರಿಸು. ನಿನಗೆ ಸುಗಂಧಲೇಪನವಾಗಬೇಕಿದ್ದರೆ ಬಳ್ಳಿಗಳ ಹೂಗಳ ರಜಃಕಣಗಳನ್ನು ಬೇಕಾದರೆ ಹಾರಿಸಿಕೊಂಡು ಹೋಗು. ಸುಮ್ಮನೆ ನನ್ನ ಪ್ರಿಯತಮಳ ಪ್ರತ್ಯಕ್ಷ ಕೈಯೇ ಆಗಿದ್ದ ಆ ಭೂರ್ಜಪತ್ರವನ್ನು ಅಪಹರಿಸಿ ಕೊಂಡುದರಿಂದ ನಿನಗಾಗುವ ಲಾಭವಾದರೂ ಏನು ! ಪ್ರಿಯೆಯ ಹಸ್ತ ಲೇಖನ, ಚಿತ್ರ ಮೊದಲಾದವುಗಳ ವಿರಹಯಾತನೆಯನ್ನು ಕಡಮೆ ಮಾಡಿ ಕೊಳ್ಳುವ ಸಾಧನಗಳಿಂದ ಹೇಗಾದರೂ ಜೀವ ಹಿಡಿದುಕೊಂಡು ಒದ್ದಾಡು ತ್ತಿರುವ ಮನುಷ್ಯನನ್ನು ಹಣ್ಣುಗಾಯಿ ನೀರುಗಾಯಿ ಮಾಡುವದು ನಿನ್ನಂಥವ ನಿಗೆ ಶೋಭಿಸತಕ್ಕ ಮಾತಲ್ಲ ! ' ಎಂದೆಂದುಕೊಳ್ಳುತ್ತ ತನ್ನ ಆಸನವನ್ನು ಬಿಟ್ಟಿದ್ದನು.

ರಾಜನ ಭಾಷಣವನ್ನು ಕೇಳಿ ನಿಪುಣಿಕೆಯು 'ರಾಣಿಯವರೇ, ಈ ಭೂರ್ಜಪತ್ರದ ಮಾತೇ ನಡೆದಿದೆ' ಎನ್ನಲಾಗಿ ರಾಣಿಯು 'ಅದೇನಿರುವದೆಂಬ ನನ್ನು ನೋಡುತ್ತೇನೆ' ಎಂದಂದಳು.

ರಾಜನು ಭೂರ್ಜಪತ್ರದಬಗ್ಗೆ ತಳಮಳಿಸುತ್ತಿರುವಾಗ ಅವನ ಸಮೀಪ ವಲ್ಲಿ ಏನೋ ಬಿದ್ದಂತಾಗಲು ರಾಜನು ಉತ್ಕಂಠಿತನಾಗಿ ಅದು ಭೂರ್ಜಪತ್ರವೇ ಇರಬೇಕೆಂದು ಬಗೆದು ಮಾಣವಕನಿಗೆ ಅದನ್ನು ತೆಗೆದುಕೊಳ್ಳಲು ಹೇಳಿದನು. ಅದರಂತೆ ಮಾಣವಕನು ಅದನ್ನೆತ್ತಿ ನೋಡಿದನು. ಅದು ಭೂರ್ಜಪತ್ರವಾಗಿ ರದೆ ನವಿಲುಗರಿಯಾಗಿತ್ತು. ಮಾಣವಕನು ಅದನ್ನು ಕಂಡು 'ಯಾವುದರ

ಕೂದಲುಗಳು ಮ್ಲಾನವಾಗಿವೆಯೋ ಅಂಥ ನವಿಲುಗರಿಯು ನನ್ನನ್ನು ಮೋಸ ಗೊಳಿಸಿತು' ಎಂದು ಹೇಳಿದನು.

ಅಲ್ಲಿ ಬಿದ್ದುದು ಆ ಭೂರ್ಜಪತ್ರವೇ ಎಂದು ರಾಜನು ಸ್ವಲ್ಪ ಉಲ್ಲ ಸಿತನಾಗಿದ್ದನು. ಆದರೆ ಮಾಣವಕನ ಮಾತನ್ನು ಕೇಳಿ ಉದಾಸೀನವದನನಾಗಿ 'ದುರ್ದೈವಿಯಾದ ನಾನೀಗ ನತ್ತಂತೆಯೇ ಆಗಿದೆ. ಇದರಲ್ಲೇನು ಸಂಶಯವೇ ಉಳಿದಿಲ್ಲ' ವೆಂದುಕೊಂಡನು.

ರಾಜನು ಈ ಪ್ರಕಾರವಾಗಿ ಭೂರ್ಜಪತ್ರದಬಗ್ಗೆ ಪರಿತಪಿಸುವದನ್ನು ಕಂಡು, ಆ ಭೂರ್ಜಪತ್ರವೇ ಮುಂದೆ ಹೋಗಲು ಸುಸಂಧಿಯನ್ನು ಕಲ್ಪಿಸಿ ಕೊಟ್ಟಿದೆ ಎಂದು ತಿಳಿದು ವಸುಮತಿ ರಾಣಿಯು ಅದನ್ನೇ ಕೈಯಲ್ಲಿ ಹಿಡಿದು ಕೊಂಡು ರಾಜನ ಮುಂದೆ ಹೋಗಿ 'ಆರ್ಯಪುತ್ರರೇ, ತಾವು ಹೀಗೆ ದುಃಖಿ ತರಾಗಬಾರದು. ತೆಗೆದುಕೊಳ್ಳಿರಿ ಆ ಭೂರ್ಜಪತ್ರವನ್ನು' ಎಂದು ಅವನ ಮುಂದೆ ಚೆಲ್ಲಿಬಿಟ್ಟಳು.

ರಾಜನು ತೀರ ಹುಚ್ಚನೇ ಆಗಿದ್ದನು. ಹಗಲಿರುಳೂ ಉರ್ವಶಿಯ ಧ್ಯಾನವೇ ಹತ್ತಿದ್ದರೂ ತನ್ನ ರಾಣಿಯ ಅಪಮಾನವನ್ನು ಮಾಡಿದ್ದಿಲ್ಲ. ರಾಣಿಯ ದರ್ಶನವು ಸಂಭವಿಸಿದ ಕಾಲದಲ್ಲಿ ತನ್ನ ಮನಸು ಅಸ್ಥಿರವಿದ್ದಾಗ್ಯೂ ಕೂಡ ರಾಜನು ತನ್ನ ಮಾನಸಿಕವ್ಯಥೆಯನ್ನು ಅವಳಿಗೆ ತಿಳಿಯಗೊಡದಂತೆ ಬಹಳ ಸಾವಧಾನ ಚಿತ್ತನಾಗಿರುತ್ತಿದ್ದನು. ಹೀಗಿದ್ದರೂ ಕೂಡ ಆ ಭೂರ್ಜಪತ್ರವು ರಾಣಿಯ ಕೈಗೇ ಸಿಕ್ಕಿತು. ಆ ಯೋಗದಿಂದ ತಾನು ಮಾಡಿದ ಕಾರಭಾರವು ರಾಣಿಗೆ ತಿಳಿಯಿತಲ್ಲಾ ಎಂದು ರಾಜನಿಗೆ ನಾಚಿಕೆಯೆನಿಸಿತು. ಅವನ ಮನಸು ವ್ಯಗ್ರವಾಯಿತು. 'ಪ್ರತ್ಯಕ್ಷವಾಗಿಯೇ ಸಿಕ್ಕುಬಿಟ್ಟದ್ದಾಯಿತು; ಗುಟ್ಟು ರಟ್ಟಾ ಯಿತು. ಇನ್ನೇನು ಉಪಾಯವಿದಕ್ಕೆ?' ಎಂದೆನ್ನುತ್ತ ರಾಣಿಯ ಕೈಯನ್ನು ಹಿಡಿದು ಅವಳಿಗೆ 'ಸ್ವಾಗತ' ವೆಂದು ಹೇಳಿದನು.

'ಇಂಥ ಪರಿಸ್ಥಿತಿಯಲ್ಲಿ ಸ್ವಾಗತವೇತರದು? ನಾನೇ ಈಗಿಲ್ಲಿಗೆ ಬರ ಬಾರದೆ ಬಂದಿರುವೆನು' ಎಂದ ರಾಣಿಯ ಮಾತನ್ನು ಸಹಿಸಿಕೊಂಡು ರಾಜನು ಮುಂಗಾಣದವನಾಗಿ ತನ್ನ ಮನದಿಂಗಿತವಂತೂ ಇವಳಿಗೆ ತಿಳಿದೇ ಬಿಟ್ಟಿದೆ. ಇದಕ್ಕಿನ್ನೇನು ಮಾಡಬೇಕು, ಯಾವ ಹಂಚಿಕೆಯನ್ನು ಹೂಡಬೇಕೆಂಬ ಸಂಕೇತದಿಂದ ಮಾಣವಕನ ಕಡೆಗೆ ನೋಡಿದನು.

'ಕದ್ದ ಪದಾರ್ಥಗಳೇ ಸಿಕ್ಕಂಥ ತುಡುಗನಿಗೆ ಇನ್ನೇನಾದರೂ ಹೇಳಬೇಕೆಂಬುವದಿರುತ್ತದೆಯೋ?'

'ಮೂರ್ಖಾ, ಇದು ನಗೆಚೇಷ್ಟೆಯ ಹೊತ್ತಲ್ಲ. ಏನಾದರೂ ಉಪಾಯ ಹೇಳಬಾರದೇ ?'

'ನೀನೀಗ ನಿನ್ನ ಕೋಪಿಷ್ಠ ಹೆಂಡತಿಯ ಕಾಲ ಮೇಲೆ ತಲೆಯನ್ನಿಟ್ಟು, ರಾಣೀಸರಕಾರ್, ನನ್ನ ಮೇಲೆ ಪ್ರಸನ್ನಳಾಗು ಎಂದು ಬೇಡಿಕೊಳ್ಳು, ಅಂದ ರಾಯಿತು.'

''ಅದು ನಿಜ. ಈ ಉಪಾಯವನ್ನು ಬಿಟ್ಟು ಬೇರಾವ ಉಪಾಯವೇ ಇಲ್ಲೆಂದು ತೋರುತ್ತದೆ. 'ಪ್ರಿಯೇ, ನಾನು ನಿಜವಾಗಿಯೇ ಈ ಪತ್ರವನ್ನು ಹುಡುಕುತ್ತಲೇ ಇರಲಿಲ್ಲ. ನಾನು ಶೋಧಿಸುತ್ತಿದ್ದ ಪತ್ರವು ಇದಾಗಿರದೆ, ಬೇರೊಂದು ಪತ್ರ ರಾಜಕೀಯ ಪ್ರಸಂಗಕ್ಕೆ ಸಂಬಂಧಪಟ್ಟಂಥಾದ್ದಾಗಿತ್ತು.

'ಹೀಗೆ ಮಾತಾಡಲೇಬೇಕಾಗಿದೆ. ತಮ್ಮ ಸೌಭಾಗ್ಯವನ್ನು ತಾವೇ ಹೇಳಿಕೊಳ್ಳದೆ ಗತಿಯಿಲ್ಲ'

ಇಷ್ಟರಲ್ಲಿ ಏನಾದರೂ ಮಾತನಾಡಿ ರಾಣಿಯನ್ನು ನಗಿಸಿಬಿಡಬೇಕೆಂದು ಮಾಣವಕನು 'ರಾಣಿಯವರೇ, ಗಡಿಬಿಡಿ ಮಾಡಿ ಈ ನಮ್ಮ ಪರಮ ಪ್ರಿಯ ಮಿತ್ರನಿಗೆ ಊಟಕ್ಕೆ ಹಾಕಿರಿ. ಪಿತ್ತಪ್ರಕೋಪದಿಂದ ಅವನ ತಲೆಯು ತಿರುಗಿ ಹೋಗಿದೆ. ಒಂದೆರಡು ತುತ್ತು ತಿಂದು ಸ್ವಾಸ್ಥ್ಯವನ್ನು ಹೊಂದಲಿ' ಎಂದು ನಡುವೇ ಬಾಯಿಹಾಕಿದನು.

ಅವನ ಈ ನಗೆಚೇಷ್ಟೆಯನ್ನು ಕೇಳಿ ವಸುಮತಿ ರಾಣಿಯು 'ನಿಪುಣಿಕೆಯೇ, ಈ ಬ್ರಾಹ್ಮಣನು ತನ್ನ ಮಿತ್ರನ ಸಮಾಧಾನವನ್ನು ಒಳ್ಳೇ ರೀತಿಯಿಂದ ಮಾಡಿದನಲ್ಲವೇ ?' ಎಂದಳು.

ಮಾಣವಕನು ಸುಮ್ಮನಿರಲಾರದೆ ಮಾತಿಗೆ ಮಾತು ಕೊಟ್ಟರಾಯಿತೆಂದು ಬಗೆದು 'ನಿಜವಾಗಿಯೇ ನೋಡಿದರೆ ನಾನು ನನ್ನ ಮಿತ್ರನಿಗೆ ವಿಚಿತ್ರವಾದ ತಿಂಡಿಯನ್ನು ಕೊಟ್ಟು ಅವನ ಸಮಾಧಾನ ಮಾಡಿದ್ದೇನೆ' ಎಂದನು. ಅದನ್ನು ಕೇಳಿ ರಾಜನು ಸಿಟ್ಟಾಗಿ 'ಮೂರ್ಖಾ, ನಿನ್ನ ಮಾತಿನಿಂದ ನಾನು ಅಪರಾಧಿಯಲ್ಲದಿದ್ದರೂ ಅಪರಾಧಿಯೆಂದು ಸಿದ್ಧ ಮಾಡುತ್ತಿರುವಿ, ಜೋಕೆ' ಎಂದನು.

'ಮಹಾರಾಜರೇ, ಇದರಲ್ಲಿ ನಿಮ್ಮ ಅಪರಾಧವೇನೂ ಇರುವದಿಲ್ಲ. ನಾನೇ ಅಪರಾಧ ಮಾಡಿದ್ದೇನೆ. ಯಾಕೆಂದರೆ ಈ ಹೊತ್ತಿಗೆ ನನ್ನ ದರ್ಶನವು ತಮಗೆ ಪ್ರತಿಕೂಲವೆಂದೆನಿಸುತ್ತಿದ್ದರೂ ನಾನು ನಿಮ್ಮ ಮುಂದೆ ನಿಂತಿದ್ದೇನೆ. ಇಗೋ ನೋಡಿರಿ-ನಾನು ಹೊರಟುಹೋಗುತ್ತೇನೆ' ಎಂದು ರಾಣಿಯು ಎನ್ನಲಾಗಿ, ರಾಜನು ಅವಳನ್ನು ಸಮಾಧಾನ ಮಾಡಬೇಕೆಂದು 'ನಿಜವಾಗಿ ನೋಡಿದರೆ ನಾನೇ ಅಪರಾಧಿ. ಈಗ ಪ್ರಸನ್ನಳಾಗು. ನಿನ್ನ ಸಿಟ್ಟನ್ನು ಕಡಮೆ ಮಾಡು. ಒಡೆಯನು ಸಿಟ್ಟಾದನೆಂದರೆ ಸೇವಕನು ನಿರಪರಾಧಿಯೆಂದು ಹೇಗೆ ಅನ್ನಲು ಬರುವದು?' ಎಂದೆನ್ನುತ್ತ ಅವಳ ಕಾಲಮೇಲೆ ತನ್ನ ತಲೆಯು ನ್ನಿರಿಸಿದನು.

ವಾಸ್ತವಿಕವಾಗಿ ನೋಡಿದರೆ ಅವಳು ತನ್ನ ಸಿಟ್ಟನ್ನು ಸೈರಿಸಿಕೊಳ್ಳ ಬೇಕಾಗಿತ್ತು. ಆದರೆ ಅವಳ ಮನಸು ಇಷ್ಟರಿಂದ ಸಮಾಧಾನಪಟ್ಟು ರಾಜನ ಈ ಬಹುಮಾನಕ್ಕೆ ತಲೆಬಾಗಿಸೆನೆಂದು ಹೇಳುತ್ತಿತ್ತು. ಆದರೂ ಇದರ ಪಶ್ಚಾತ್ತಾಪವು ಮುಂದೆ ಆಗದೆ ಇರಲಾರದೆಂದು ಅವಳ ಮನವು ಭಯ ಗ್ರಸ್ತವಾಗಿತ್ತು. ಇಂಥ ವಿಚಾರಗಳ ತಾಕಲಾಟದಲ್ಲಿ ರಾಣಿಯು ರಾಜನನ್ನು ಧಿಕ್ಕರಿಸಿ ಅಲ್ಲಿಂದ ಕಾಲ್ದೆಗೆದೇ ಬಿಟ್ಟಳು.

ಅವಳು ಫಡಫಡಿಸುತ್ತ ಹೋಗುವದನ್ನು ಕಂಡು ಮಾಣವಕನು 'ರಾಜನೇ, ಇನ್ನು ಇಲ್ಲಿಂದೇಳು. ಸುಮ್ಮನೆ ದುಃಖವನ್ನೇಕೆ ಕೊಡುವೆ? ಮಳೆಗಾಲದಲ್ಲಿ ರಾಡಿ ನೀರಿನಿಂದ ತುಂಬಿರುವ ನದಿಯಂತೆ ನಿನಗೆ ತಲೆಭಾರ ಳಾದ ನಿನ್ನ ರಾಣಿಯು ಪ್ರಸನ್ನಳಾಗದೆ (ಸ್ವಚ್ಛಳಾಗದೆ) ಹೊರಟುಹೋದಳು' ಎಂದು ಹೇಳಿದನು.

ಅದನ್ನು ಕೇಳಿ ರಾಜನು ಅಲ್ಲಿಂದೆದ್ದನು. ನಿಜವಾಗಿ ಪುರೂರವ ರಾಜನ ಯೋಗ್ಯತೆ ಎಷ್ಟು ದೊಡ್ಡದು! ಅವನು ಸಾರ್ವಭೌಮ ಪದವಿಯಲ್ಲಿದ್ದು ಕೊಂಡು ಸರ್ವೋಪಭೋಗಗಳನ್ನು ಭೋಗಿಸುತ್ತಿದ್ದನಲ್ಲದೆ ತ್ರೈಲೋಕ ಗಳಲ್ಲಿಯೂ ತನ್ನ ಭೀತಿಯನ್ನು ಬೀರಿದ್ದನು. ಇಂದ್ರಾದಿ ದೇವತೆಗಳೂ ಅವನ ಮನಸ್ಸು ಅಪ್ರಸನ್ನವಾಗದಂತೆ ಜಾಗರೂಕರಾಗಿರುತ್ತಿದ್ದರು. ದೊಡ್ಡ ದೊಡ್ಡ ವೀರಾದಿವೀರರೆಲ್ಲರೂ ಅವನ ಪಾದಧೂಲಿಯಲ್ಲಿ ಹೊರಳಾಡು ತ್ತಿದ್ದರು. ಇಂಥ ರಾಜನಿಗೆ ಯಃಕಶ್ಚಿತಳಾದ ಅವನ ಹೆಂಡತಿಯು ಇಷ್ಟೊಂದು

ತುಚ್ಛೀಕರಿಸಿದ್ದನ್ನು ನೋಡಿದರೆ ಬಹಳೇ ಆಶ್ಚರ್ಯವಾಗುವದು. ರಾಣಿಯು ಇಷ್ಟು ಅಪಮಾನಗೊಳಿಸಿದ್ದರೂ ರಾಜನಿಗೆ ಎಳ್ಳಷ್ಟು ಸಿಟ್ಟು ಬರಲಿಲ್ಲ. ಸ್ತ್ರೀರೂಪೀ ಮಾಯೆಯ ಪ್ರಭಾವವೇ ಎಷ್ಟೊಂದು ವಿಲಕ್ಷಣವಾಗಿದೆ! ಜಗಜ್ಜೇತೃವಾದ ವೀರನೂ ಕೂಡ ಈ ಸ್ತ್ರೀರೂಪೀ ಮಾಯೆಯ ಪಾದಗಳ ಮೇಲೆ ಬಿದ್ದು ಹೊರಳಾಡುತ್ತಿರುವದನ್ನು ಕಂಡು ಅವಳು ಅಷ್ಟೊಂದು ಅಹಂಕಾರದಿಂದ ಮೆರೆಯುತ್ತಿದ್ದಾಳೆ!

'ಮಾಣವಕನೇ, ರಾಣಿಯು ಸಿಟ್ಟಿಗೆದ್ದು ಹೋದುದೇನು ಒಳ್ಳೆಯ ದಾಗಲಿಲ್ಲ. ಇಷ್ಟವಿದ್ದ ಮನುಷ್ಯನು ಪ್ರೇಮವಿಲ್ಲದೆ ಆಡಿದ ಸವಿಮಾತುಗಳು ಚತುರ ಸ್ತ್ರೀಯರ ಮನಸನ್ನು ಪ್ರವೇಶ ಮಾಡಲು ಶಕ್ತವಾಗಲಾರವು. ಖೊಟ್ಟಿ ಮಣಿಯು ಜಾತಿ ಮಣಿಗಳ ಸಾಲಿನಲ್ಲಿ ಹೇಗೆ ಶೋಭಿಸಲಾರದೋ ಹಾಗೆ ಪ್ರೇಮರಹಿತವಾದ ಮಾತುಗಳು ಅವರಿಗೆ ಎಳ್ಳಷ್ಟೂ ಸೇರಲಾರವು' ಎಂದು ರಾಜನು ಮಾತನಾಡಿದನು.

'ಅವಳು ಸಿಟ್ಟಿಗೆದ್ದು ಪಲಾಯನ ಮಾಡಿದ್ದು ಒಂದು ರೀತಿಯಿಂದ ನೋಡಿದರೆ ನಿನಗೆ ಒಳ್ಳೆಯದೇ ಆಯಿತು. ಕಣ್ಣು ಬಂದವರೆದುರಿಗೆ ದೀಪದ ಬೆಳಕು ಯಾತಕ್ಕೆ ಬೇಕು?'

'ಹಾಂ! ಹಾಗೆ ಮಾತನಾಡಕೂಡದು. ನನ್ನ ಮನಸು ಉರ್ವಶಿಯ ಕಡೆಗೆ ಹರಿಯುತ್ತಿದ್ದರೂ ರಾಣಿಯನ್ನು ನಾನು ಮೊದಲಿನಂತೆಯೇ ಬಹು ಮಾನಿಸುತ್ತಿದ್ದೇನೆ. ನಿಜವಾಗಿಯೂ ಅವಳು ಸಿಟ್ಟಿಗೆದ್ದಿದ್ದರೆ ನನಗೆ ಸಮಾಧಾನವಾಗದೇ ಇರುತ್ತಿದ್ದಿಲ್ಲ. ಆದರೆ ಇಂಥ ವೇಳೆಯಲ್ಲಿ ಅವಳ ಕಾಲಿಗೆರಗಿದರೂ ಅವಳು ನನ್ನನ್ನು ಧಿಕ್ಕರಿಸಿ ತೆರಳಿದ್ದರಿಂದ ನಾನು ನನ್ನ ಮನಸ್ಸನ್ನು ಕಲ್ಲು ಮಾಡಿದ್ದೇನೆ.'

'ಮಹಾರಾಜರೇ, ನಿಮ್ಮ ಧೈರ್ಯವನ್ನು ಒಂದು ಗಳಿಗೆ ಬದಿಗಿರಿಸಿರಿ. ಹಸಿದ ಹಾರುವನ ಹರಣ ಬದುಕಿಕೊಳ್ಳುವಂತೇನಾದರೂ ವ್ಯವಸ್ಥೆ ಮಾಡಿರಿ. ಊಟ ಮಾಡುವ ಹೊತ್ತು. ಆರು ತಾಸು ಹೊತ್ತಾಗಿದೆ.'

ಅದನ್ನು ಕೇಳಿ ರಾಜನು ಸೂರ್ಯನ ಕಡೆಗೆ ನೋಡಿ 'ಅಹುದು; ಆರು ತಾಸಾಗಿದೆ. ಅಗೋ ನೋಡು–ಅಲ್ಲಿ ಮಯೂರವು ಬಿಸಿಲಿನ ತಾಪಕ್ಕೆ ಬಳಲಿ ಗಿಡದ ನೆರಳಿಗೆ ಬಂದು ಕುಳಿತಿದೆ. ಅದರಂತೆ ಕರ್ಣಿಕಾರ ಹೂವಿನ

ಅರಳುಮೊಗ್ಗನ್ನೊಡೆದು ಭ್ರಮರವು ಅದರೊಳಗೆ ಹೋಗಿ ಆಶ್ರಯವನ್ನು ಹೊಂದಿದೆ. ನೀರ್ಗೋಳಿಗಳು ಸರೋವರದ ನೀರು ಕಾಯ್ದುದರಿಂದ ಅದನ್ನು ಬಿಟ್ಟು ದಂಡೆಯ ಮೇಲಿರವ ಕಮಲಿನಿಯ ಆಶ್ರಯಕ್ಕೆ ಬಂದಿವೆ. ಅದರಂತೆ ಕ್ರೀಡಾಗೃಹದಲ್ಲಿರುವ ಪಂಜರದಲ್ಲಿಯ ಗಿಳಿಯೂ ಕೂಡ ಬಿಸಿಲಿನಿಂದ ಬೆಂಡಾಗಿ ನೀರಡಿಸಿ ಬಾಯ್ಬಿಡುತ್ತಿದೆ’ ಎಂದಂದು ಮಾಣವಕನೊಂದಿಗೆ ರಾಜನು ಸ್ನಾನ-ಸಂಧ್ಯಾದಿ ಕರ್ಮಗಳನ್ನಾಚರಿಸಲು ಹೊರಟು ಹೋದನು.

---

## ೩

ಭರತಮುನಿಯು ಪ್ರಯೋಗ ಮಾಡಿಸಿದ ಲಕ್ಷ್ಮೀಸ್ವಯಂವರ ನಾಟಕದಲ್ಲಿ ಪಾತ್ರವಹಿಸಿದ ಉರ್ವಶಿಯ ಮನವು ಪುರೂರವ ರಾಜನಲ್ಲಿ ನಟ್ಟು ಹೋಗಿದ್ದರಿಂದ ಚಿತ್ತಸ್ವಾಸ್ಥ್ಯವಿಲ್ಲದ ಅವಳ ಕಡೆಯಿಂದ ದೊಡ್ಡದೊಂದು ಪ್ರಮಾದವುಂಟಾಯಿತು.

ಭರತಮುನಿಗೆ ಪೇಲವ ಮತ್ತು ಗಾಲವ ಎಂಬಿಬ್ಬರು ಶಿಷ್ಯರಿದ್ದರು. ನಾಟ್ಯಪ್ರಯೋಗವನ್ನು ನೋಡಲು ಹೋಗುವ ಮುಂದೆ ಭರತಮುನಿಯು ಪೇಲವನನ್ನು ಸಂಗಡ ಕರೆದುಕೊಂಡು, ಗಾಲವನನ್ನು ಅಗ್ನಿಹೋತ್ರದ ರಕ್ಷಣೆಗಾಗಿ ಆಶ್ರಮದಲ್ಲಿರಿಸಿ ಹೋಗಿದ್ದನು. ಗಾಲವನಿಗೆ ಆ ನಾಟ್ಯಪ್ರಯೋಗವನ್ನು ನೋಡಬೇಕೆಂಬ ಬಯಕೆಯು ಬಹಳಿತ್ತು. ಆದರೆ ಗುರುವಿನಾಜ್ಞೆಯಾದ್ದರಿಂದ ನಿರುಪಾಯನಾಗಿ ಆಶ್ರಮದಲ್ಲಿಯೇ ಉಳಿಯಬೇಕಾಯಿತು. ಭರತಮುನಿಯು ಪ್ರಯೋಗವನ್ನು ಮುಗಿಸಿಕೊಂಡು ಆಶ್ರಮಕ್ಕೆ ಬಂದ ಮೇಲೆ ಪೇಲವ, ಗಾಲವರ ಸಂದರ್ಶನವಾಯಿತು. ಗಾಲವನಂತೂ ಪೇಲವನು ಯಾವಾಗ ಬರುವನೋ, ಅವನಿಂದ ನಾಟ್ಯಪ್ರಯೋಗದ ಸುದ್ದಿಯನ್ನು ಯಾವಾಗ ಕೇಳುವೆನೋ ಎಂದು ಬಹಳೇ ಕುತೂಹಲಿಯಾಗಿದ್ದನು. ಬೆಟ್ಟಿಯಾದೊಡನೆ ಅವರಿಬ್ಬರು ಮಾತಿಗಾರಂಭಿಸಿದರು.

' ಪೇಲವಾ, ನಾನು ಇಡೀ ರಾತ್ರಿಯೆಲ್ಲ ಅಗ್ನಿಹೋತ್ರವನ್ನು ಸಂರಕ್ಷಿಸುತ್ತ ಕುಳಿತಿದ್ದೆನು. ನೀನು ಗುರುಗಳೊಡನೆ ಹೋಗಿದ್ದಿ. ಅಲ್ಲಿಯ ಸುದ್ದಿಯನ್ನೊಂದಿಷ್ಟು ಹೇಳು. ಗುರುಗಳ ನಾಟಕ ಪ್ರಯೋಗವು ದೇವಸಭೆಯನ್ನು ಸಂತುಷ್ಟಿಗೊಳಿಸಿತೋ ಇಲ್ಲವೋ ? '

' ಗಾಲವಾ, ದೇವಸಭೆಯು ಸಂತುಷ್ಟಿಯನ್ನು ಹೇಗೆ ಹೊಂದಿತೆಂಬುದೇ ನನಗೆ ತಿಳಿಯದಾಗಿದೆ. ಯಾಕೆಂದರೆ ಸರಸ್ವತಿಯೇ ಮಾಡಿದ ಆ ಲಕ್ಷ್ಮೀ ಸ್ವಯಂವರವೆಂಬ ನಾಟಕದ ಪ್ರಯೋಗದಲ್ಲಿ ಉರ್ವಶಿಯು ಮುಖ್ಯ ಪಾತ್ರವನ್ನು ವಹಿಸಿದ್ದಳು. ಆದರೆ ಬೇರೆ ಬೇರೆ ರಸಗಳ ಆವಿರ್ಭಾವವನ್ನು ಪ್ರಕಟಗೊಳಿಸುವಾಗ ಉನ್ಮತ್ತಳಾದಂತೆ ಕಂಡುಬಂದುದರಿಂದ ಅವಳು ಮೇಲಿಂದ ಮೇಲೆ ತಪ್ಪುತ್ತಿದ್ದಳು.'

' ನಿನ್ನ ಹೇಳಿಕೆಯ ಮೇಲಿಂದ ಅವಳ ಕಡೆಯಿಂದ ದೋಷಗಳಾಗಿರಬೇಕೆಂದು ತೋರುತ್ತಿದೆ. ನೀನು ಆ ದೋಷಗಳನ್ನು ಹೇಳದೆ ಹಾಗೆಯೆ ಬಿಟ್ಟೆಯಲ್ಲ ! '

' ಅಹ ! ಅದರಲ್ಲೇನು ವಿಶೇಷವಿದೆ ? ಪ್ರಮಾದದಿಂದ ಅವಳ ಭಾಷಣದಲ್ಲಿ ತಪ್ಪಾಯಿತು. '

' ಅದೇ ಹೇಗಾಯಿತೆಂಬದನ್ನು ಹೇಳಬಾರದೇ ? '

' ಆ ನಾಟಕದಲ್ಲಿ ಮುಖ್ಯ ಪಾತ್ರವೇ ಲಕ್ಷ್ಮಿಯು. ಆ ಪಾತ್ರವನ್ನೇ ಉರ್ವಶಿಯು ಧರಿಸಿದ್ದಳು. ವಾರುಣಿಯ ಪಾತ್ರವನ್ನು ಮೇನಕೆಯು ವಹಿಸಿದ್ದಳು. ಲಕ್ಷ್ಮಿಯ ಸ್ವಯಂವರದ ಪ್ರಸಂಗ ಬಂದಾಗ ವಾರುಣೀ ದೇವಿಯು ' ಲಕ್ಷ್ಮಿಯೇ, ಮೂರೂ ಲೋಕಗಳಲ್ಲಿಯ ಪುರುಷರೆಲ್ಲರೂ ಇಲ್ಲಿಗೆ ಆಗಮಿಸಿದ್ದಾರೆ. ವಿಷ್ಣುವನ್ನು ಮೊದಲ್ಗೊಂಡು ಲೋಕಪಾಲಕರೆಲ್ಲರೂ ಇಲ್ಲಿರುತ್ತಾರೆ. ಅಂದಮೇಲೆ ನಿನ್ನ ಮನಸು ಯಾವ ಪುರುಷನನ್ನು ವರಿಸಬೇಕೆಂದು ಇಚ್ಛಿಸುತ್ತಿದೆ ? ' ಎಂದು ವಿಚಾರಿಸಿದಳು. '

' ಅವಳ ಪ್ರಶ್ನೆಗೆ ಲಕ್ಷ್ಮಿಯ ಪಾತ್ರಧಾರಿಯಾದ ಉರ್ವಶಿಯು ವಿಪರೀತ ಉತ್ತರವನ್ನು ಕೊಟ್ಟಳು. ಅವಳು ಪುರುಷೋತ್ತಮನಲ್ಲಿ (ವಿಷ್ಣು) ಮನವು ನಟ್ಟಿದೆ ಎನ್ನುವದರ ಬದಲು ಪುರೂರವನಲ್ಲಿ ನಟ್ಟಿದೆ ಎಂದು ಅವಳ ಬಾಯಿಂದ ಒಮ್ಮೆಲೆ ಬಂದುಬಿಟ್ಟಿತು. '

'ಮುಂದೇನಾಗುವದಿದೆಯೋ ಹಾಗೆ ಬುದ್ಧಿಯುಂಟಾಗುತ್ತದೆ. ಇಂದ್ರಿಯಗಳೂ ಅದನ್ನನುಲಕ್ಷಿಸಿಯೇ ವರ್ತಿಸುತ್ತವೆ. ಅದಕ್ಕೇನು ಮಾಡುವದು ? ಆದರೆ ಅವಳ ಮುಖದಿಂದ ಬಂದ ಶಬ್ದಗಳನ್ನು ಗುರುಗಳು ಕೇಳಿ ಅವಳ ಮೇಲೆ ಸಿಟ್ಟಾಗಲಿಲ್ಲವೇ ?'

'ಆಗದೇನು ? ಗುರುಗಳು ಆಗಿಂದಾಗಲೇ ಶಾಪವನ್ನು ಕೊಟ್ಟೇಬಿಟ್ಟರು. ಆದರೆ ಇಂದ್ರನು ಆಕೆಯ ಮೇಲೆ ಅನುಗ್ರಹವನ್ನು ಮಾಡಿದನು.'

'ಅದು ಹೇಗೆ ?'

'ಗುರುಗಳು ಉರ್ವಶಿಯನ್ನುದ್ದೇಶಿಸಿ ನಾನು ಕಲಿಸಿದುದನ್ನು ಬಿಟ್ಟು ಏನೋ ವಿಪರೀತ ಮಾತನಾಡಿದುದರಿಂದ ನಿನಗೆ ಈ ದೇವಲೋಕದ ವಾಸವು ಇಲ್ಲದಂತಾಗಲಿ ಎಂದು ಗುರುಗಳು ಉರ್ವಶಿಗೆ ಶಾಪವನ್ನಿತ್ತರು.'

ಈ ಪ್ರಕಾರವಾಗಿ ಗುರುಗಳು ಅವಳಿಗೆ ಶಾಪವನ್ನು ಕೊಟ್ಟರು. ಅದರಿಂದ ಅವಳ ಮುಖವು ನಾಚಿಕೆಯಿಂದ ಕೆಳಗಾಯಿತು. ಅದನ್ನು ಕಂಡು ಇಂದ್ರನು 'ಯಾವ ರಾಜರ್ಷಿ ಪುರೂರವನಲ್ಲಿ ನಿನ್ನ ಮನಸು ನಟ್ಟಿದೆಯೋ ಅವನು ನನಗೆ ನನ್ನ ಯುದ್ಧಪ್ರಸಂಗಗಳಲ್ಲಿ ನೆರವನ್ನು ನೀಡುವ ಮಿತ್ರನಾಗಿದ್ದಾನೆ. ಆದಕಾರಣ ನೀನು ಇನ್ನು ಮುಂದೆ ಅವನನ್ನೇ ಪ್ರೀತಿಸು. ಅವನಿಂದ ಒಂದು ಸಂತಾನವಾಗುವವರೆಗೆ ನೀನು ಅವನ ಬಳಿಯಲ್ಲಿಯೇ ಕುಶಲದಿಂದ ಬಾಳು' ಎಂದನು. ಅದನ್ನು ಕೇಳಿ ಗಾಲವನು 'ಎರಡನೆಯವರ ಪರಾಕ್ರಮವನ್ನು ಗೌರವಿಸುವಂಥ ಇಂದ್ರನಿಗೆ ಹಾಗೆ ಮಾಡುವದು ಯಥಾಯೋಗ್ಯವಾಗಿದೆ' ಎನ್ನಲಾಗಿ, ಪೇಲವನು ಮೇಲೆ ಮುಖ ಮಾಡಿ 'ಏನಿದು! ನಾವು ಮಾತನಾಡುತ್ತ ಕುಳಿತುಬಿಟ್ಟೆವಲ್ಲ ! ಈ ಮಾತಿನ ಸವಿಯಲ್ಲಿ ಸ್ನಾನ ಮಾಡುವ ವೇಳೆಯೇ ಮೀರಿಹೋಯಿತು. ನಡೆ ಇನ್ನು. ಸ್ನಾನ ಮಾಡಿ ಗುರುಗಳ ಸೇವೆಗೆ ಸಿದ್ಧರಾಗೋಣ' ಎಂದೆನ್ನಲು ಅವರಿಬ್ಬರೂ ಗುರುಸೇವೆ ಸಲ್ಲಿಸಲು ಅಲ್ಲಿಂದ ಹೊರಟುಬಿಟ್ಟರು.

ಇಂದ್ರನೇನೋ ಉರ್ವಶಿಗೆ ಎರಡನೆಯ ಕಡೆಯಲ್ಲಿರಲು ಅನುಗ್ರಹಿಸಿದ್ದರೂ ಮೂಲತಃ ಅದು ಅವನಿಗೆ ಸೇರದ ಮಾತಾಗಿತ್ತು. ಆದರೂ ಪುರೂರವನು ಮೇಲಿಂದಮೇಲೆ ಯುದ್ಧಪ್ರಸಂಗಗಳಲ್ಲಿ ತನಗೆ ನೆರವಾಗುತ್ತಿದ್ದನಾದ ಕಾರಣ ಅವನನ್ನು ಸ್ನೇಹಬಾಂಧವ್ಯದಲ್ಲಿಟ್ಟುಕೊಳ್ಳಬೇಕು ಎಂಬ

ಉದ್ದೇಶದಿಂದ ಇಂದ್ರನು ಉರ್ವಶಿಗೆ ಹಾಗೆ ಆಜ್ಞೆಯನ್ನಿತ್ತಿದ್ದನು. ಉರ್ವಶಿಗೂ ಏನಾದರೂ ಮಾಡಿ ಅವನ ಸಹವಾಸವು ಅತ್ಯವಶ್ಯಕವಾಗಿ ಬೇಕಾಗಿಯೇ ಇತ್ತು. ವಸ್ತುತಃ ನೋಡಿದರೆ ಸರ್ವಸುಖಗಳ ತವರುಮನೆಯಾದ ಸ್ವರ್ಗದಲ್ಲಿ ವಾಸಿಸುವವಳಿಗೆ ಈ ದುಃಖಮಯವಾದ ಮೃತ್ಯು ಲೋಕದಲ್ಲಿ ನೆಲೆಸಲು ಆದ ಶಿಕ್ಷೆಯೇನು ಕಡಮೆಯದಾಗಿರಲಿಲ್ಲ. ಅದರಿಂದ ಅವಳಿಗೆ ಕಷ್ಟವಾಗುವದು ಸಹಜವಾಗಿದ್ದರೂ ಪುರೂರವನ ಸಮಾಗಮವನ್ನು ಬಯಸಿದ ಉರ್ವಶಿಗೆ ಭರತಮುನಿಯು ಕೊಟ್ಟ ಶಾಪವು ಶಾಪವಾಗಿರದೆ ವರವೇ ಆಗಿದ್ದಿತು. ಅದರಿಂದ ಅವಳು ಪುರೂರವನ ಕಡೆಗೆ ಹೊರಡುವ ಸಿದ್ಧತೆಯನ್ನೇ ಮಾಡತೊಡಗಿದಳು.

ಮೇಲೆ ನಿವೇದಿಸಿದಂತೆ ರಾಜನ ಸುದೈವದಿಂದ ದುಃಖಾಗ್ನಿಯಿಂದ ಸಂತಪ್ತವಾದ ಅವನ ಶರೀರವನ್ನು ಶಾಂತಗೊಳಿಸುವದಕ್ಕಾಗಿ ಅಮೃತ ವೃಷ್ಟಿಯು ಅವನ ಕಡೆಗೆ ಒಲಿದಿತ್ತು. ಅದು ಕೈಗೆ ಬರಲು ಸ್ವಲ್ಪ ಅವಕಾಶ ಮಾತ್ರ ಇತ್ತು. ಅದಕ್ಕೆ ಯೋಗ್ಯ ಸಂಧಿಯೂ ಒದಗಿ ಬಂದಿತು.

ವಸುಮತಿ ರಾಣಿಯು ಸಿಟ್ಟಿಗೆದ್ದು ತನ್ನ ಅರಮನೆಗೆ ಹೋದ ನಂತರ ಕೆಲವೊಂದು ಸಮಯ ಕಳೆದ ಮೇಲೆ ಶಾಂತಳಾದಳು. ಅವಳು ತಾನು ಹಾಗೆ ಮಾಡಿದುದು ತಪ್ಪಾಯಿತೆಂದು ಪಶ್ಚಾತ್ತಾಪಪಟ್ಟುಕೊಂಡಳು. ರಾಜನು ಕಾಲಿಗೆರಗಿದ್ದರೂ ಅದನ್ನು ಧಿಕರಿಸಿದುದು ಒಳ್ಳೆಯದಾಗಲಿಲ್ಲೆಂದು ಅವಳಿಗೆನಿಸಿತು. ಆದರೂ ಹೆಂಗಸರ ಸ್ವಭಾವವು ಹಟಮಾರಿಯಾದುದರಿಂದ ಯೋಗ್ಯ ಸಮಯವು ಕೂಡಿಬರದ ಹೊರತು ರಾಜನ ಪಾದಗಳನ್ನು ಹಿಡಿದುಕೊಳ್ಳಲೂ ಅವಳಿಗೆ ನಾಚಿಕೆಯೆನಿಸತೊಡಗಿತು.

ಇತ್ತ ರಾಜನಾದರೂ ಅಂದಿನಿಂದ ಅವಳ ಬೆಟ್ಟಿಗೆ ಹೋಗಲೇ ಇಲ್ಲ. ಗಂಡಹೆಂಡರಲ್ಲಿ ಮೌನಸಾಮ್ರಾಜ್ಯವೇ ನೆಲೆಸಿತು. ಇಬ್ಬರೂ ಪರಸ್ಪರರ ದರ್ಶನ ಒದಗಿಬರಲೆಂದು ಉತ್ಕಂಠಿತರಾಗಿದ್ದರು. ಆದರೂ ಅಭಿಮಾನದ ಮೂಲಕ ಯಾರು ಯಾರು ಮೊದಲು ದರ್ಶನವನ್ನು ತೆಗೆದುಕೊಳ್ಳಬೇಕೆಂಬ ಇತಿಮಿತಿಯಲ್ಲಿ ಕಾಲ ವಿಲಂಬವಾಗುತ್ತಿತ್ತು.

ರಾಜನು ಉರ್ವಶಿಯ ಗುಂಗಿನಲ್ಲಿದ್ದುದರಿಂದ ಅವನು ರಾಣಿಯ ವಿಷಯವಾಗಿ ಅಷ್ಟೊಂದು ಉತ್ಕಂಠಿತನಾಗಿರಲಿಲ್ಲ. ಆದರೂ ಅವಳು ಮಾತ್ರ

ಅವನ ವಿಷಯವಾಗಿ ತೀರ ಉತ್ಕಂಠಿತಳಾಗಿದ್ದಳು. ಅವನನ್ನು ಅನಾದರಗೊಳಿಸಿದ ಸಂದರ್ಭವು ಅವಳನ್ನು ಒಂದೇ ಸವನೆ ಕಟಿಯುತ್ತಿತ್ತು. ಆದರೆ ಏನೊಂದೂ ನಿಮಿತ್ತವಿಲ್ಲದೆ ರಾಜನ ದರ್ಶನವನ್ನು ತೆಗೆದುಕೊಳ್ಳುವದಾದರೂ ಹೇಗೆಂದು ಹಿಂದೆಮುಂದೆ ನೋಡುತ್ತಿದ್ದಳು. ಅನೇಕ ದಿನಗಳುರುಳಿದರೂ ನಿಮಿತ್ತವೇ ಸಿಗಲಿಲ್ಲ. ಆದ್ದರಿಂದ ಅವಳು ಕೌಮುದಿ ಎಂಬ ವ್ರತವನ್ನು ಆರಂಭಿಸಿದಳು. ಈ ನಿಮಿತ್ತ ಮಾಡಿಕೊಂಡು ರಾಜನ ದರ್ಶನ ತೆಗೆದುಕೊಳ್ಳುವ ಯೋಗವನ್ನುಂಟುಮಾಡಿಕೊಂಡಳು.

ವ್ರತವನ್ನು ಆರಂಭಿಸಿದ ದಿನವೇ ನಿಪುಣಿಕೆಯನ್ನು ರಾಜನ ಬಳಿಗೆ ಕಳುಹಿ ವ್ರತವು ಮುಗಿಯುವ ದಿನ ಅವಶ್ಯವಾಗಿ ಬರಬೇಕೆಂದು ಬಿನ್ನವಿಸಿಕೊಂಡಳು. ರಾಜನು ಆ ಮಾತಿಗೆ ತನ್ನ ಒಪ್ಪಿಗೆಯನ್ನು ತಿಳಿಸಿದನು. ಅದರಂತೆ ವ್ರತ ಸಮಾಪ್ತವಾಗುವ ದಿನವನ್ನು ನಿಶ್ಚಯಿಸಿ ತಪ್ಪದೆ ಬರಬೇಕೆಂಬ ಅಭಿಲಾಷೆಯನ್ನು ರಾಣಿಯು ತನ್ನ ವಾಸದ ಚೋಪದಾರನನ್ನು ರಾಜನ ಕಡೆಗೆ ಕಳುಹಿದಳು.

ರಾಜರ ರಾಣೀವಾಸದಲ್ಲಿ ಬಹುತೇಕವಾಗಿ ನಪುಂಸಕರು, ಮೂಕರು, ಕಿವುಡರು ಇಲ್ಲವೆ ಮುದುಕರು—ಇವರೇ ಮೊದಲಾದ ತರದ ಆಳುಗಳನ್ನು ನಿಯಮಿಸಿಕೊಳ್ಳುವ ಪೂರ್ವಪರಂಪರೆಯಂತೆ ಈ ಚೋಪದಾರನು ಮುದುಕನಿದ್ದನು. ರಾಣಿಯ ಆಜ್ಞೆಯಂತೆ ಅವನು ಬಡಿಗೆಯನ್ನೂರುತ್ತ ರಾಜನ ಕಡೆಗೆ ಹೊರಟನು. ಅವನಿಂಧ ನಡೆಯುವದಾಗುತ್ತಿದ್ದಿಲ್ಲ. ಆದರೆ ಆಜ್ಞೆಯಾದ ಮೇಲೆ ಹೋಗಲೇಬೇಕೆಂಬ ಸೇವಾಧರ್ಮಕ್ಕನುಸರಿಸಿ ಅವನು ಮೆಲ್ಲಮೆಲ್ಲನೆ ಸಾಗಿದನು. “ ತಾರುಣ್ಯಭರದಲ್ಲಿ ಕುಟುಂಬವತ್ಸಲರು ದ್ರವ್ಯ ಸಂಪಾದನೆಯ ಯತ್ನ ಮಾಡುತ್ತಾರೆ. ಇಳಿ ವಯಸ್ಸಾದ ಮೇಲೆ ಕೌಟುಂಬಿಕ ಭಾರವನ್ನು ಮಕ್ಕಳ ಮೇಲೆ ಹೊರಿಸಿ ದೇವರ ಹೆಸರನ್ನು ಜಪಿಸುತ್ತ ವಿಶ್ರಾಂತಿ ತೆಗೆದುಕೊಳ್ಳುತ್ತಾರೆ. ಆದರೆ ನನ್ನ ಹಣೆಯಬರಹದಲ್ಲಿ ಎಲ್ಲವೂ ವಿರುದ್ಧವಾಗಿದೆ. ನಾನಿಷ್ಟು ಮುದುವನಾಗಿದ್ದರೂ ಇನ್ನೂ ಸೇವೆ ಮಾಡುವದು ತಪ್ಪಿಲ್ಲ. ಕೈಯಿಂದ ಕೆಲಸವಾಗದಿದ್ದರೆ ಒಡೆಯರ ಕೈಯಿಂದ ಛೀ ಹಾಕಿಸಿಕೊಳ್ಳುವದಂತೂ ನಡೆದೇ ಇದೆ. ಆ ಅಪಮಾನವನ್ನಂತೂ ಇನ್ನೂ ಸಹಿಸಲೇ ಬೇಕಾಗಿದೆ. ಹೀಗೆ ಇಷ್ಟು ವಯಸ್ಸಿನಲ್ಲಿಯ ಈ ಸೇವೆಯು ಒಂದು ತರದ

ತುರಂಗವಾಸವೆಂದರೂ ಸಲ್ಲುವದು. ಬೇರೆ ಬೇಕಾದ ಕೆಲಸವನ್ನು ಮಾಡ ಬಹುದು. ಆದರೆ ಹೆಂಗಸರ ಸೇವೆಯನ್ನು ಮಾಡುವದು ಬಹಳ ಕಠಿಣ ಕೆಲಸವಾಗಿದೆ ! " ಎಂದು ತನ್ನ ಮನಸಿನಲ್ಲಿಯೇ ಅಂದುಕೊಳ್ಳುತ್ತ ರಾಜನ ಕಡೆಗೆ ಹೊರಟಿದ್ದನು.

ಚೋಪದಾರನು ರಾಜನ ಆಪ್ತಸೇವಕರ ಬಳಿಗೆ ಬಂದು ಕಾಶೀರಾಜನ ಕನ್ಯೆಯಾದ ವಸುಮತಿ ರಾಣಿಯು 'ವ್ರತದ ಸಮಾಪ್ತಿಗೋಸುಗ ತನ್ನ ಅಭಿ ಮಾನವನ್ನು ಬದಿಗೊತ್ತಿ ನಿಪುಣಿಕೆಯ ಕಡೆಯಿಂದ ಈ ಮೊದಲು ತಮಗೆ ಬಿನ್ನವಿಸಿಕೊಂಡಿದ್ದಳು. ಅದರ ಬಗ್ಗೆಯೇ ಈಗ ಹೋಗಿ ಅವರ ನೆನಪನ್ನು ಕೊಟ್ಟು ಬಾ ಎಂದು ಹೇಳಿದ್ದಾರೆ' ಎಂಬ ರಾಣಿಯ ಆಜ್ಞೆಯನ್ನು ನಿವೇದಿ ಸಿದನು. ಈ ಹೊತ್ತಿಗೆ ಮಹಾರಾಜರು ಸಂಧ್ಯಾಸಮಯವಾದ್ದರಿಂದ ಸ್ನಾನ ಸಂಧ್ಯಾದಿ ಕರ್ಮಗಳಲ್ಲಿ ನಿರತರಾಗಿರಬೇಕು. ಅವರು ಅವನ್ನು ತೀರಿಸಿ ಬಂದಮೇಲೆ ರಾಣಿಯ ವಿನಂತಿಯನ್ನು ತಿಳಿಸಬೇಕು' ಎಂದು ಹೇಳಿದನು.

ಸಂಧ್ಯಾಕಾಲದ ಶೋಭೆಯನ್ನು ನೋಡಿ, ದಿವಸವು ಮುಗಿಯುವ ಹೊತ್ತಿನಲ್ಲಿ ಅರಮನೆಯ ವಾತಾವರಣವು ಬಹಳ ರಮಣೀಯವಾಗಿರುತ್ತದೆ. ಆಟ ನೋಟಕ್ಕೆಂದು ಸಾಕಿದ ನವಿಲು ದಣಿದುಬಂದು ವಾಸಯಷ್ಟಿಯ ಮೇಲೆ ವಿಶ್ರಾಂತಿಗೆಂದು ಕುಳಿತುಬಿಟ್ಟಿದೆ. ಕಿಡಿಕಿ ಬೆಳಕಿಂಡಿಗಳ ಮೂಲಕ ಹೊರ ಬೀಳುವ ಧೂಪದ ಹೊಗೆಯಿಂದ ಆಕಾಶಕ್ಕೆ ಹೊಗೆಮಂಜು ಮುತ್ತಿದಂತೆ ಭಾಸವಾಗುತ್ತದೆ. ಅಲ್ಲಲ್ಲಿ ರಂಗೋಲಿಯನ್ನು ಹಾಕಿ ಹೂಗಂಧಗಳನ್ನೇರಿಸಿ ಪೂಜೆಮಾಡಿ ದೀಪವನ್ನು ಹಚ್ಚಿದ್ದಾರೆ.

ಅಷ್ಟರಲ್ಲಿ ರಾಜನು ಸಂಧ್ಯಾವಂದನೆ ತೀರಿಸಿ ಎರಡನೆಯ ಮಹಲಿಗೆ ಹೋಗಲು ಹೊರಟುಬರುತ್ತಿದ್ದುದನ್ನು ಚೋಪದಾರನು ನೋಡಿದನು.

ರಾಜಪುರುಷರ ವಿಲಾಸಲೋಲುಪತೆಯು ವಿಲಕ್ಷಣವಿರುತ್ತದೆ.ಅದರಲ್ಲಿ ರಾಜನು ವಿಲಾಸಪ್ರಿಯನಿದ್ದರೆ ತೀರಿಯೇ ಹೋಯಿತು. ಅವನ ಆ ವಿಲಾಸಕ್ಕೆ ಮಿತಿಯೇ ಉಳಿದಿರುವದಿಲ್ಲ. ರಾಜನು ಒಂದು ಅರಮನೆಯಿಂದ ಇನ್ನೊಂದು ಅರಮನೆಗೆ ಹೊರಟಿದ್ದರೂ ಅವನೊಡನೆ ಕೆಲವು ಹೆಂಗಸರು ದೀವಟಿಗೆಗಳನ್ನು ಹಿಡಿದು ಅವನ ಸುತ್ತುಮುತ್ತಲೂ ಹೊರಟಿದ್ದರು. ಅವರನ್ನು ಕಂಡು ಚೋಪ ದಾರನು ಈ ಹೆಂಗಸರ ಕೈಯಲ್ಲಿ ಹಿಡಿದ ದೀವಟಿಗೆಗಳಿಂದ ಸುತ್ತುವರಿಯಲ್ಪಟ್ಟ

ರಾಜನು ಹೂಗಳಿಂದ ತುಂಬಿದ ಕರ್ಣಿಕಾರ ಗಿಡಗಳಿಂದ ಮುಚ್ಚಿಹೋದ ಪರ್ವತದಂತೆ ಕಾಣುತ್ತಾನೆಂದುಕೊಂಡನು. ಚೋಪದಾರನು ರಾಜನ ಕಣ್ಣಿಗೆ ಸಹಜವಾಗಿ ಬೀಳುವ ಸ್ಥಳದಲ್ಲಿ ನಿಂತುಕೊಳ್ಳಬೇಕೆಂಬ ವಿಚಾರದಿಂದ ಅವನು ಬರುವ ದಾರಿಯಲ್ಲಿ ಒಂದು ಬದಿಗೆ ನಿಂತುಕೊಂಡನು.

ಉರ್ವಶಿಯ ದರ್ಶನೋತ್ಸುಕನಾದ ರಾಜನು ಈಗ ರಾಜಕಾರ್ಯದಲ್ಲಿ ನಿಮಗ್ನನಾಗಿರುವದರಿಂದ ಅವನ ಉತ್ಕಟತೆಯು ಕಡಮೆಯಾಗಿತ್ತು. ಆದ್ದರಿಂದ ಹಗಲು ಸಂಕಟವಿಲ್ಲದೆ ಕಳೆಯಿತು. ಆದರೆ ಈಗ ವಿನೋದಾರ್ಥವಾಗಿ ಯಾವ ಸಾಧನಗಳಿಲ್ಲದ್ದರಿಂದ ದೀರ್ಘವಾಗಿ ಕಾಣುವ ರಾತ್ರಿಯನ್ನು ಹೇಗೆ ಕಳೆಯಬೇಕೆಂಬ ಚಿಂತೆಯು ಅವನನ್ನು ಕಾಡತೊಡಗಿತು.

ಅಷ್ಟರಲ್ಲಿ ರಾಜನು ತೀರಹತ್ತಿರದಲ್ಲಿ ಆಗಮಿಸಿದನೆಂದು ಚೋಪದಾರನು ಮುಂದೆ ಬಂದು ಮೊಣಕಾಲೂರಿ ನಮಸ್ಕರಿಸಿ ಅತ್ಯಂತ ನಮ್ರತೆಯಿಂದ ಎರಡೂ ಕೈಗಳನ್ನು ಜೋಡಿಸಿ " ಮಹಾರಾಜರೇ, ರಾಣಿಯವರು ಬಿನ್ನಹ ಮಾಡಿಕೊಂಡಿದ್ದಾರೆ. 'ಮಣಿಹರ್ಮ್ಯ ಮಹಾಲಿನ ಗಚ್ಚಿಯ ಮೇಲೆ ಚಂದ್ರನು ಚನ್ನಾಗಿ ಕಾಣುತ್ತಾನೆ. ಅಲ್ಲಿ ತಮ್ಮ ಹಾದಿಯನ್ನು ಕಾಯಬೇಕು. ರೋಹಿಣಿಯ ಸಮಾಗಮವಾಗುವ ವರೆಗೆ ತಾವು ಅಲ್ಲಿಯೇ ಇರಬೇಕು' ಎಂದು ಪ್ರಾರ್ಥಿಸಿಕೊಂಡಿದ್ದಾರೆ." ಎಂದು ಬೇಡಿಕೊಂಡನು.

ಅದನ್ನು ಕೇಳಿ ರಾಜನು 'ಚೋಪದಾರನೇ, ರಾಣಿಯವರಿಗೆ ಯಾವುದು ಇಷ್ಟವೋ ಅದರಂತೆ ಮಾಡಲು ನಾನು ಸಿದ್ಧನಿರುವೆನೆಂದು ನನ್ನ ವಿನಂತಿಯನ್ನು ತಿಳಿಸು ' ಎಂದು ಹೇಳಿದನು.

ರಾಜನ ಉತ್ತರವನ್ನು ಕೇಳಿಕೊಂಡು ಅವನಿಗೆ ವಂದನೆಗಳನ್ನರ್ಪಿಸಿ ಚೋಪದಾರನು ಅಲ್ಲಿಂದ ಹೊರಟನು. ಇತ್ತ ರಾಜನು ಮಾಣವಕನನ್ನು ಕರೆದು 'ರಾಣಿಯು ವ್ರತವನ್ನಾಚರಿಸಿದುದು ನಿಜವೇ ? ಅದಕ್ಕೆ ಇಷ್ಟೆಲ್ಲ ಸಿದ್ಧತೆಯೇ ? ' ಎಂದು ವಿಚಾರಿಸಿದನು.

' ನನಗೂ ಹಾಗೆಂದು ತೋರುತ್ತದೆ. ಯಾಕೆಂದರೆ ಅಂದು ಅವಳು ನಿನ್ನನ್ನು ಧಿಕ್ಕರಿಸಿ ಹೊರಟು ಹೋದುದಕ್ಕೆ ಈಗ ಅವಳಿಗೆ ಪಶ್ಚಾತ್ತಾಪವೆನಿಸಿರಬೇಕು. ಇಂದು ಆ ವ್ರತದ ನಿಮಿತ್ತ ಮಾಡಿಕೊಂಡು ಅದರ ಪರಿಮಾರ್ಜನ ಮಾಡಿಕೊಳ್ಳಬೇಕೆಂದು ಹೀಗೆ ಮಾಡಿರಬಹುದೆಂದು ಕಾಣುತ್ತದೆ.'

ಮಾಣವಕನ ಈ ತರ್ಕವು ವಸ್ತುತಃ ನಿಜವೇ ಇತ್ತು. ಅದನ್ನು ರಾಜನೂ ಒಪ್ಪಿ 'ನೀನು ಸರಿಯಾಗಿಯೇ ಕಳೆ ಹಿಡಿದು ಹೇಳಿದಿ. ಯಾಕೆಂದರೆ ಗಂಡನು ಕಾಲಿಗೆರಗಿದರೂ ಅದನ್ನು ತಿರಸ್ಕರಿಸಿ ಹೋಗುವಂಥ ಹೆಂಡತಿಗೆ ಹಿಂದುಗಡೆಯಲ್ಲಿ ಪಶ್ಚಾತ್ತಾಪವಾಗುವದುಂಟು. ಆದರೂ ಅವರು ನಾಚಿಕೆ ಪಟ್ಟುಕೊಂಡು ಮನಸಿನಲ್ಲಿಯೇ ಕೊರಗುತ್ತಿರುತ್ತಾರೆ. ಪತಿಯ ವಿಷಯದಲ್ಲಿ ಅವರಿಗೆ ಹೃದ್ರೋಗವೇ ಹತ್ತಿದಂತಾಗುತ್ತದೆ. ಇರಲಿ. ರಾಣಿಯ ಹೇಳಿಕೆಯ ಮೇರೆಗೆ ನಾವು ಆ ಮಣಿಹರ್ಮ್ಯದ ಗಚ್ಚಿಯ ಮೇಲೆ ಹೋಗಿ ಅವಳ ಬರವನ್ನು ನಿರೀಕ್ಷಿಸೋಣ' ಎಂದೆಂದು ಮಾಣವಕನೊಂದಿಗೆ ಅತ್ತ ಕಡೆಗೆ ಸಾಗಿದನು

ಆ ಮಣಿಹರ್ಮ್ಯದ ಹತ್ತಿರ ಬಂದಾಗ ಮಾಣವಕನು ಮುಂದೆ ಬಂದು 'ಗಂಗೆಯ ತರಂಗಗಳಷ್ಟು ಶೀತಲವಿರುವ ಈ ಮೆಟ್ಟಲುಗಳು ಸ್ಫಟಿಕ ಶಿಲೆಯವಿರುತ್ತವೆ. ಯಾವಾಗಲೂ ರಮಣೀಯವಾಗಿ ತೋರುವ ಈ ಮಣಿ ಹರ್ಮ್ಯವನ್ನು ಈ ಮೆಟ್ಟಲುಗಳಿಂದ ಏರುವವನಾಗು.' ಎಂದನು.

ಅದನ್ನು ಕೇಳಿ ರಾಜನೂ ಅವನ ಪರಿವಾರವೂ ಆ ಮಾರ್ಗದಿಂದಲೇ ಮೇಲೆ ಹತ್ತಿದರು. ಗಚ್ಚಿಯ ಮೇಲೆ ಬಂದಮೇಲೆ ಆಕಾಶದ ಕಡೆಗೆ ನೋಡಿ ಮಾಣವಕನು 'ಚಂದ್ರೋದಯವು ಬೇಗನೆ ಆಗುವದು. ಯಾಕೆಂದರೆ ಅಂಧಕಾರದಿಂದ ಮುಕ್ತವಾಗಿರುವ ಮೂಡಣ ದಿಶೆಯ ಮುಖವು ಕೆಂಪಾಯಿತು' ಎಂದನು.

'ಚೆನ್ನಾಗಿ ಮಾತನಾಡಿದೆ. ಉದಯಕಾಲದ ಗುಪ್ತ ಚಂದ್ರನ ಕಿರಣ ಗಳು ಅಂಧಃಕಾರವನ್ನು ತೊಲಗಿಸಿಬಿಟ್ಟದ್ದರಿಂದ ಮುಂದೆ ಇಳಿಬಿದ್ದ ಅಂಧಃ ಕಾರರೂಪೀ ಕೇಶಗಳು ಹಿಂದಕ್ಕೆ ಸರಿದಂತೆ ಈ ಪೂರ್ವದಿಶೆಯ ಮುಖವು ನನ್ನ ಕಣ್ಣಿಗೆ ಮನೋಹರವಾಗಿ ಕಾಣುತ್ತಿದೆ' ಎಂದು ರಾಜನೆನ್ನುತ್ತಿರುವಷ್ಟ ರಲ್ಲಿ ಚಂದ್ರನು ಕಾಣತೊಡಗಿದನು. ಮಾಣವಕನು ಚಂದ್ರನನ್ನು ಕಂಡು ನಗುನಗುತ್ತ 'ಅಲ್ಲಿ ನೋಡಿರಿ. ಉಂಡಿಯ ಅರ್ಧದಂತೆ ಕಾಣುತ್ತಿರುವ ಔಷಧಿಗಳ ರಾಜನಾದ ಚಂದ್ರನು ಉದಯವಾಗುತ್ತಿದ್ದಾನೆ' ಎಂದನು.

ಚಂದ್ರನಿಗೆ ಉಂಡಿಯ ಉಪಮೆಯನ್ನು ಕೊಟ್ಟದ್ದನ್ನು ಕೇಳಿ ರಾಜನು 'ಕೂಳಬಕ್ಕನಿಗೆ ಯಾವುದೇ ವಿಷಯಕ್ಕೆ ಮಾತಾಡುವ ಪ್ರಸಂಗ ಬಂದರೆ

ಅವನ ಮಾತಿನ ಪರ್ಯವಸಾನವು ಕೂಳಿನಲ್ಲಿಯೇ ಆಗುತ್ತಿದೆ ' ಎಂದು ಚಂದ್ರನಿಗೆ ನಮಸ್ಕಾರ ಮಾಡಿ ' ನಕ್ಷತ್ರಗಳ ರಾಜನೇ, ಧಾರ್ಮಿಕರ ಕ್ರಿಯಾ ಕರ್ಮಗಳು ಯಥಾ ಕಾಲಕ್ಕೆ ಜರುಗಬೇಕೆಂದು ಸೂರ್ಯನಲ್ಲಿ ಪ್ರವೇಶಿಸುವವನೇ, ಚಂದ್ರರೂಪದಿಂದ ಅಮೃತವೃಷ್ಟಿಯನ್ನು ಕೆಡವಿ ಪಿತೃ-ದೇವತೆಗಳನ್ನು ತೃಪ್ತಿಬಡಿಸುವವನೇ, ರಾತ್ರಿಯಲ್ಲಿ ಎಲ್ಲ ಕಡೆಯಲ್ಲಿ ಪಸರಿರುವ ಅಂಧಃಕಾರವನ್ನು ನಾಶಮಾಡುವವನೇ, ಶಂಕರನ ಮಸ್ತಕಧಾರಿಯೇ, ನಿನಗೆ ಅನಂತ ವಂದನೆಗಳು ' ಎಂದು ಸ್ತುತಿಸಿದನು.

ಚಂದ್ರನು ಪುರೂರವ ರಾಜನ ಅಜ್ಜನು. ಆ ಸಂಬಂಧವನ್ನು ಮನಸಿನಲ್ಲಿ ತಂದು ಮಾಣವಕನು ' ಮಹಾರಾಜರೇ, ತಮ್ಮ ಈ ಬ್ರಾಹ್ಮಣನ ಮುಖದಿಂದ ನಿಮ್ಮಜ್ಜನು ನಿಮಗೆ ಆಜ್ಞೆಯನ್ನು ಮಾಡುತ್ತಾನೆ. ಏನೆಂದರೆ— ಈಗ ಎಷ್ಟು ಹೊತ್ತು ಹೀಗೆ ನಿಂತುಕೊಳ್ಳುವದು ! ಕೆಳಗೆ ಕುಳಿತುಕೊಳ್ಳಬೇಕು. ನನ್ನ–ಅಲ್ಲಲ್ಲ–ನಿಮ್ಮಜ್ಜನ ಆಜ್ಞೆಯನ್ನು ಪಾಲಿಸಿ ನೀವು ಕುಳಿತುಕೊಂಡರೆ ನಾನೂ ಒಂದು ಗಳಿಗೆ ಸುಖದಿಂದ ಕೂಡ್ರಬೇಕೆನ್ನುತ್ತೇನೆ ' ಎಂದನು.

ಚಂದ್ರನನ್ನು ನೋಡುವದರಲ್ಲಿ ಮಗ್ನನಾದ ರಾಜನು ಬಹಳ ಹೊತ್ತು ನಿಂತುಕೊಂಡಿದ್ದನು. ರಾಜನು ನಿಂತಿರುವನೆಂದ ಮೇಲೆ ಅವನ ಪರಿವಾರವೆಲ್ಲವೂ ನಿಂತುಬಿಟ್ಟಿತ್ತು. ಆದ್ದರಿಂದ ಮಾಣವಕನು ಬೇಕೆಂತಲೆ ಆ ಮಾತನ್ನಾಡಿದ್ದನು. ಅದರ ಇಂಗಿತವನ್ನರಿತು ರಾಜನು ' ಆಗಲಿ. ಇನ್ನು ಕೂಡೋಣ' ವೆಂದು ಕುಳಿತುಕೊಂಡನು. ದೀವಟಿಗೆಗಳನ್ನು ಹಿಡಿದುಕೊಂಡು ಸುತ್ತೂ ಕಡೆಗೆ ನಿಂತಿದ್ದ ದಾಸಿಯರನ್ನು ರಾಜನು ನೋಡಿ ' ಚಂದ್ರನ ಪ್ರಕಾಶವು ಬಿದ್ದಿದೆ. ಆದ್ದರಿಂದ ಈ ದೀವಟಿಗೆಗಳನ್ನುರಿಸುತ್ತ ಪ್ರಕಾಶದ ದ್ವಿರುಕ್ತಿಯನ್ನು ಏಕೆ ಮಾಡುವಿರಿ ? ಅವುಗಳನ್ನು ತೆಗೆದುಕೊಂಡು ಹೋಗಿ ವಿಶ್ರಾಂತಿಯನ್ನು ಪಡೆಯಿರಿ ' ಎಂದು ಹೇಳಲಾಗಿ ರಾಜನ ಆಜ್ಞೆಯಂತೆ ಸನ್ನದ್ಧರಾಗಿ ರಾಜನಿಗೆ ನಮಸ್ಕರಿಸಿ ಆ ದೀವಟಿಗೆಯನ್ನು ಹಿಡಿದವರೆಲ್ಲರೂ ಹೊರಟು ಹೋದರು.

ತನ್ನ ಹತ್ತಿರ ಯಾರೂ ಇಲ್ಲೆಂದು ಚಂದ್ರನ ಕಡೆಗೆ ದೃಷ್ಟಿಯನ್ನು ಬೀರಿ ರಾಜನು ' ಮಾಣವಕನೇ, ರಾಣಿಯ ಆಗಮನಕ್ಕೆ ಇನ್ನೂ ಎರಡು ಗಳಿಗೆ ಅವಕಾಶವಿದ್ದಂತೆ ತೋರುವದು. ಆದಕಾರಣ ನನ್ನ ಅವಸ್ಥೆಯೇನಾಗಿದೆ ಎಂಬದನ್ನು ಸಾಧಿಸಿದ ಈ ಏಕಾಂತದಲ್ಲಿ ಹೇಳುತ್ತೇನೆ, ಕೇಳು ' ಎಂದನು.

ರಾಜನು ತನ್ನ ಯಾವ ಅವಸ್ಥೆಯನ್ನು ಹೇಳುವವನಿದ್ದನೋ ಆ ಅವಸ್ಥೆಯು ಉರ್ವಶಿಯ ಸಮಾಗಮವು ಆಗಲೊಲ್ಲದೆಂಬುದೇ ಇರಬಹುದೆಂದು ಅನುಮಾನಗೊಂಡು ಮಾಣವಕನು 'ಓಹೋ! ಆ ನಿನ್ನವಳು ಇಲ್ಲೆಲ್ಲಿಯೂ ಕಾಣುವದಿಲ್ಲವಲ್ಲ! ಆದರೂ ಅವಳ ಆ ಪ್ರೇಮವನ್ನು ನೆನೆಸಿಕೊಂಡು ಹೇಗಾದರೂ ಮಾಡಿ ಜೀವಧಾರಣ ಮಾಡಿಕೊಂಡಿರಲು ಬರುತ್ತದೆ' ಎಂದನು.

'ಅದು ನಿಜ. ಆದರೂ ನನ್ನ ಮನಸಿಗೆ ಸಂತೋಷವಾಗುತ್ತಿದೆ. ಅಂಕುಡೊಂಕು ಕಲ್ಲುಗಳಲ್ಲಿ ಸಿಕ್ಕುಬಿದ್ದಿರುವದರಿಂದ ಮಂದವಾಗಿರುವ ನದಿಯ ಪ್ರವಾಹವೂ ಮತ್ತು ಪ್ರಿಯಜನರ ಸಮಾಗಮ ಸುಖಕ್ಕೆ ಮೇಲಿಂದಮೇಲೆ ಅಡ್ಡಿ-ಆತಂಕಗಳನ್ನೊಡ್ಡುವ ಕಾಮನೂ ಒಂದೇ ಆಗಿವೆ.'

'ನೀನು ಚಿಂತೆಯನ್ನು ಮಾಡಬೇಡ. ಅವಳ ಹೃದ್ರೋಗದಿಂದ ನಿನ್ನ ಶರೀರವು ಬತ್ತಿಹೋಗಿದೆ. ಅದರಿಂದ ನಿನಗೆ ಅಪ್ಸರೆಯ ಸಮಾಗಮವು ಆಗದಿರಲಾರದೆಂದು ಕಾಣುತ್ತದೆ.'

ಅಷ್ಟರಲ್ಲಿ ರಾಜನ ಬಲಭುಜವು ಸ್ಫುರಣವಾಯಿತು. ಇದೊಂದು ಶುಭಶಕುನವಾಯಿತೆಂದು ಬಗೆದು ರಾಜನು 'ಅತ್ಯಂತ ವ್ಯಥಿತನಾದ ನನ್ನಲ್ಲಿ ಆಶೆಯನ್ನುಂಟುಮಾಡುವ ಮಾತುಗಳನ್ನಾಡಿ ನನ್ನನ್ನು ಹೇಗೆ ಸಮಾಧಾನಗೊಳಿಸುವಿಯೋ ಹಾಗೆ ನನ್ನ ಈ ಉತ್ತಮ ಭುಜವೂ ಸ್ಫುರಣಗೊಂಡು ಸಮಾಧಾನ ಮಾಡುತ್ತದೆ' ಎಂದನು.

'ನನ್ನ ಮಾತುಗಳು ಸುಳ್ಳಾಗುವವೆಂದು ತಿಳಿಯಬೇಡ. ನನ್ನಂಥ ಸದ್ಬ್ರಾಹ್ಮಣನ ವಾಕ್ಯವು ಎಂದಿಗೂ ಹುಸಿಹೋಗಲಾರದು' ಎಂದು ಮಾಣವಕನಾಡಿದ ಮಾತುಗಳನ್ನು ಕೇಳಿ ರಾಜನು ಉರ್ವಶಿಯ ವಿಷಯದಲ್ಲಿ ಆಶಾಭೂತನಾಗಿ ಕುಳಿತನು. ಮಾಣವಕನ ಮಾತುಗಳು ಸತ್ಯವಾಗುವ ಸುದೈವ ಒದಗಿಬರುವ ಪ್ರಸಂಗವು ಬಂದಿತು.

ಇತ್ತ ಉರ್ವಶಿಯು ಶಾಪಗ್ರಸ್ತಳಾಗಿ ಪುರೂರವನ ಕಡೆಗೆ ಬರಲು ಗೆಳತಿಯಾದ ಚಿತ್ರಲೇಖೆಯೊಂದಿಗೆ ಅಭಿಸಾರಿಕೆಯ ವೇಷವನ್ನು ಧರಿಸಿ ವಿಮಾನಾರೂಢಳಾಗಿ ತಾನು ಧರಿಸಿಕೊಂಡಿರುವ ವೇಷಭೂಷಣಗಳನ್ನು ಕುರಿತು 'ಗೆಳತಿಯೇ, ಈಗ ನಾನು ಕೇವಲ ಮುತ್ತಿನ ಒಡವೆಗಳನ್ನು ಧರಿಸಿ

ದ್ದೇನೆ. ಕರೀ ಪತ್ತಲವನ್ನುಟ್ಟಿದ್ದೇನೆ. ಈ ವೇಷವು ನಿನಗೆ ಸೇರಿತೇ ?' ಎಂದು ವಿಚಾರಿಸಿದಳು.

'ಇಂಥ ಹೊತ್ತಿನಲ್ಲಿ ನಿನ್ನ ವೇಷ ಭೂಷಣದ ಪ್ರಶಂಸೆಯನ್ನು ಮಾಡುವ ಶಕ್ತಿಯು ನನ್ನಲ್ಲಿಲ್ಲ. ಆದರೆ ನನಗನಿಸುದಿಷ್ಟೇ-ಈಗ ನಾನು ಪುರೂರವನೇ ಆಗಬೇಕಿತ್ತು.'

'ನಾನಂತೂ ಈಗ ತೀರ ಸೋತಿದ್ದೇನೆ. ಆದಕಾರಣ ನೀನೇ ಹೋಗಿ ಅವನನ್ನು ಕರೆದುಕೊಂಡು ಬಾ. ಇಲ್ಲದಿದ್ದರೆ ನನ್ನನ್ನಾದರೂ ಆ ಭಾಗ್ಯಶಾಲಿಯಾದ ಪುರೂರವನ ಹತ್ತಿರ ಕರೆದುಕೊಂಡು ಹೋಗು.'

ಈಹೊತ್ತಿಗೆ ಉರ್ವಶಿಯ ವಿಮಾನವು ಪ್ರತಿಷ್ಠಾನ ಪಟ್ಟಣದ ಹತ್ತಿರ ಬಂದು ಮುಟ್ಟಿತು. ಇದನ್ನು ಕಂಡು ಚಿತ್ರಲೇಖೆಯು 'ಉರ್ವಶಿಯೇ, ಕೈಲಾಸಪರ್ವತದ ಶಿಖರಗಳಂತೆ ಶೋಭಿಸುವ ನಿನ್ನ ಪ್ರಿಯತಮನ ರಾಜಗೃಹವು ಯಮುನೆಯಲ್ಲಿ ಪ್ರತಿಬಿಂಬಿತವಾದಂತೆ ಕಾಣುತ್ತದೆ. ಇದರ ಮೇಲಿಂದ ನಾವು ತೀರ ಹತ್ತಿರಬಂದಿರುವೆವೆಂದು ತೋರುತ್ತದೆ' ಎಂದಳು.

'ನನ್ನ ಹೃದಯವನ್ನು ಕದ್ದಂಥ ಆ ರಾಜನು ಈಗೆಲ್ಲಿರಬಹುದು? ಏನು ಮಾಡುತ್ತಿದ್ದಾನೆ? ಎಂಬದನ್ನು ನಿನ್ನ ಪ್ರಭಾವದಿಂದ ತಿಳಿದುಕೊಂಡು ಹೇಳಬಾರದೇ ? ಎಂಬದನ್ನು ಕೇಳಿ ಚಿತ್ರಲೇಖೆಯು ಈಕೆಯೊಡನೆ ಒಂದು ಗಳಿಗೆ ಸರಸವಾಡಬೇಕೆಂದು ನಿಶ್ಚೈಸಿ 'ಮನೋರಥದಿಂದ ಕಲ್ಪಿಸಿದ ಪ್ರಿಯೆಯ ಸಮಾಗಮದ ಅನುಭವವನ್ನು ತೆಗೆದುಕೊಳ್ಳುತ್ತ ಒಂದು ವಿಲಾಸಸ್ಥಾನದಲ್ಲಿ ಕುಳಿತಿರುವಂಥ ರಾಜನು ನನ್ನ ದೃಷ್ಟಿಗೆ ಬಿದ್ದನು' ಎಂದು ಮಾತನಾಡಿದಳು.

'ಛೇ, ನನ್ನ ಹೃದಯವು ನಿನ್ನ ಮಾತನ್ನು ಸತ್ಯವೆಂದು ಒಪ್ಪಲೊಲ್ಲದು. ನಿಜವಾಗಿಯೋ ನೀನು ನಿನ್ನ ಮನೋದೇವತೆಯನ್ನು ವಿಚಾರಿಸಿ ಆ ಮಾತನ್ನು ಆಡಿದೆಯಾ ? ಪ್ರಿಯುಕರವಾದ ಸಮಾಗಮವಾಗುವ ಮೊದಲೇ ಅವನು ನನ್ನ ಹೃದಯವನ್ನು ಕದ್ದೊಯ್ದಿದ್ದಾನೆ.'

'ಹಾಗಾದರೆ ಅಲ್ಲಿನೋಡು ಮಣಿಹರ್ಮ್ಯದ ಗಚ್ಚಿಯ ಮೇಲೆ ಮಾಣವಕನೊಬ್ಬನನ್ನೇ ಸಂಗಡ ಕರೆದುಕೊಂಡು ಕುಳಿತಿದ್ದಾನೆ. ಅವನ ಹತ್ತಿರ ನಾವೂ ಹೋಗೋಣ ನಡೆ'

ಇತ್ತ ರಾಜನು ' ಮಾಣವಕಾ, ರಾತ್ರಿಯು ಹೆಚ್ಚು ಹೆಚ್ಚಾದಂತೆ ನನ್ನ ಮದನ ಬಾಧೆಯೂ ಹೆಚ್ಚಾಗುತ್ತಿದೆ ' ಎಂದನು.

ಈ ಹೊತ್ತಿಗೆ ಉರ್ವಶಿಯು ರಾಜನ ಬಳಿಯಲ್ಲಿ ಗುಪ್ತರೂಪದಿಂದಿದ್ದು ಕೊಂಡು ರಾಜನು ತನ್ನ ಮಿತ್ರನ ಸಂಗಡ ಮಾತಾಡುವದನ್ನು ಕೇಳುತ್ತಲಿದ್ದಳು. ರಾಜನು ಮಾಣವಕನಿಗೆ ಆಡಿದ ಮೇಲಿನ ಮಾತುಗಳನ್ನು ಕೇಳಿ ಉರ್ವಶಿಯು ' ಚಿತ್ರಲೇಖೆಯೇ, ಈ ವಾಕ್ಯದ ಅರ್ಥವು ಸ್ಪಷ್ಟವಾಗಿ ತಿಳಿಯಲೊಲ್ಲದು. ಅದರಿಂದ ನನ್ನ ಹೃದಯವು ಕಂಪಿಸುತ್ತಿದೆ. ನಮ್ಮ ಸಂಶಯದ ನಿವೃತ್ತಿಯಾಗುವ ವರೆಗೆ ನಾವು ಇಲ್ಲಿಯೇ ನಿಂತುಕೊಂಡು ಅವನ ಉದ್ಗಾರಗಳನ್ನು ಕೇಳೋಣ ' ಎನ್ನಲಾಗಿ, ಇಬ್ಬರೂ ಅಲ್ಲಿಯೇ ನಿಂತುಕೊಂಡರು.

ಇತ್ತ ಮಾಣವಕನು ' ತಪ್ತವಾದ ಶರೀರಕ್ಕೆ ತಂಪನ್ನೀಯುವ ಈ ಚಂದ್ರಮನ ಅಮೃತಮಯ ಕಿರಣಗಳನ್ನು ಸೇವಿಸು. ಅಂದರೆ ಹಿತವಾಗುವದು ' ಎಂದನು.

' ಇಂಥ ಉಪಾಯಗಳಿಂದ ಈ ರೋಗವು ಹೋಗುವಂತಿಲ್ಲ. ಕಾರಣವೆಂದರೆ—ಸುಗಂಧ ಬೀರುವ ಪುಷ್ಪಗಳ ಶಯ್ಯೆಯು, ಚಂದ್ರನ ಶೀತಲ ಕಿರಣಗಳು, ಮಲಯಾಗರು ಚಂದ್ರನದ ಲೇಪನವು, ರತ್ನದ ಹಾರವು ಇವೇ ಮೊದಲಾದವುಗಳು ನನಗಾಗುತ್ತಿರುವ ಮದನನ ಬಾಧೆಯನ್ನು ದೂರ ಮಾಡಲು ಶಕ್ತವಾಗಲಾರವು. ದಿವ್ಯಸ್ತ್ರೀಯಾದ ಉರ್ವಶಿಯಿಂದಾಗಬೇಕು—ಇಲ್ಲವೆ ಅವಳ ಕಥಾಶ್ರವಣದಿಂದಾಗಬೇಕು. ಬೇರೆ ಉಪಾಯವೇ ಇಲ್ಲ.'

ಅದನ್ನು ಕೇಳಿ ಉರ್ವಶಿಯು ತನ್ನ ಹೃದಯಕ್ಕೆ ' ಹೃದಯವೇ, ನೀನು ನನ್ನನ್ನು ಬಿಟ್ಟು ಅವನ ಕಡೆಗೆ ಹೋದುದರ ಫಲವು ನಿನಗೀಗ ಪ್ರಾಪ್ತವಾದಂತಾಯಿತು ' ಎಂದುಕೊಂಡಳು.

ರಾಜನ ಮಾತಿಗೆ ಮಾಣವಕನು ' ನಾನೂ ಹೀಗೆಯೇ ದುಃಖಿತನಾಗಿದ್ದೆ. ನನಗೆ ಯಾವಾಗಾವಾಗ ಬಾಸುಂದಿ ಇಲ್ಲವೆ ಶ್ರೀಖಂಡವು ಸಿಗುವದಿಲ್ಲವೋ ಆವಾಗಾವಾಗ ಅವುಗಳ ಚಿಂತೆಯನ್ನೇ ಮಾಡುತ್ತೇನೆ. ಅವುಗಳ ಬಗ್ಗೆಯೇ ಮಾತುಕತೆ ನಡೆಯಿಸಿ ಹೇಗಾದರೂ ಮಾಡಿ ಮನಸ್ಸಿನ ಸಂತಾಪವನ್ನು ದೂರ ಮಾಡಿಕೊಳ್ಳುತ್ತೇನೆ ' ಎಂದನು.

' ನಿನ್ನಂಥ ಕೊಳಬಕ್ಕನಿಗೆ ಹಾಗಾಗುವ ಸಂಭವವಿದೆ. ಆದು ನಿನಗೆ ಬೇಗನೆ ಸಿಗುವದು. '

' ಹಾಗಿದ್ದರೆ ಅವಳೂ ನಿನಗೆ ಬೇಗನೆ ಸಿಗುವಳು. '

ರಾಜನು 'ನನಗೂ ಹಾಗೆನಿಸುತ್ತದೆ' ಎಂದೆನ್ನುವಷ್ಟರಲ್ಲಿ ಚಿತ್ರಲೇಖೆಯು ' ಅಸಂತುಷ್ಟಳಾದ ನೀನು ಅವನೇನು ಮಾಡುತ್ತಾನೆಂಬದನ್ನು ಕೇಳು' ಎಂದು ಉರ್ವಶಿಗೆ ಹೇಳಿದಳು.

' ರಾಜನೇ, ನಿನಗೇನೆನಿಸುವದನ್ನು ಹೇಳಿಬಿಡು. '

' ಮೊಟ್ಟಮೊದಲು ಅವಳ ದರ್ಶನವಾದಾಗ ರಥದ ಹೊಯ್ದಾಟದಿಂದ ಅವಳು ನನ್ನ ಈ ಬಲಭುಜದ ಮೇಲೆ ಬಿದ್ದಳು. ಆಗ ನನ್ನ ಬಲಭಾಗವು ಆ ಸ್ಪರ್ಶದಿಂದ ಧನ್ಯವಾಯಿತು. ಉಳಿದ ಶರೀರ ಭಾಗವು ಪೃಥ್ವಿಗೆ ಭಾರ ವಾಗಿದೆ. '

ಉರ್ವಶಿಯ ಕಿವಿಗೆ ಯಾವುದು ಬೀಳಬೇಕಾಗಿತ್ತೋ ಅದೇ ಬಿದ್ದುದ ರಿಂದ ' ಇನ್ನೇಕೆ ವೇಳೆಯನ್ನು ಕಳೆಯುವದು ' ಎನ್ನುತ್ತ ಅವಳು ಒಮ್ಮೆಲೆ ರಾಜನ ಸಮ್ಮುಖದಲ್ಲಿ ನಿಂತಳು; ಆದರೆ ತಿರಸ್ಕಾರಿಣೀ ವಿದ್ಯೆಯನ್ನು ತೆಗೆ ದೊಗೆದಿರಲಿಲ್ಲ. ಆದಕಾರಣ ಅವಳು ಅವನಿಗೆ ಕಾಣಿಸಲಿಲ್ಲ. ಅದರಿಂದ ಆವನು ಸುಮ್ಮನೆ ಕುಳಿತಿದ್ದನು. ಅದನ್ನು ಕಂಡು ಉರ್ವಶಿಯು ' ಚಿತ್ರ ಲೇಖೆಯೇ, ನಾನು ಮುಂದೆಯೇ ನಿಂತಿದ್ದರೂ ಮಹಾರಾಜರು ನನ್ನ ಬಗ್ಗೆ ಉದಾಸೀನರಾಗಿಯೇ ಇರುವರಲ್ಲ ! ' ಎಂದು ವಿಷಾದವನ್ನು ವ್ಯಕ್ತಗೊಳಿ ಸಿದಳು.

' ನೀನು ಬಹಳ ಗಡಿಬಿಡಿಯನ್ನು ಮಾಡುತ್ತಿರುವಿ. ನೀನು ತಿರಸ್ಕಾರಿಣೀ ವಿದ್ಯೆಯಿಂದ ದೂರಳಾಗದಿರುವದರಿಂದ ಅವನಿಗೆ ನೀನು ಕಾಣುವದಾದರೂ ಹೇಗೆ ? '

ಉರ್ವಶಿಯು ರಾಜನ ದರ್ಶನ ಯಾವಾಗಲೋ ಎಂದು ಹಾತೊರೆಯು ತ್ತಿದ್ದಳು. ಚಿತ್ರಲೇಖೆಯು ಹೇಳಿದಂತೆ ತಿರಸ್ಕಾರಿಣೀ ವಿದ್ಯೆಯನ್ನು ತೆಗೆ ದೊಗೆದು ಪ್ರತ್ಯಕ್ಷವಾಗಿ ಅವನ ಮುಂದೆ ನಿಲ್ಲುವ ಸಿದ್ಧತೆಯನ್ನು ಅವಳು ನಡೆ ಸಿದ್ದಳು. ಆದರೆ ಅಷ್ಟರಲ್ಲಿ ಮತ್ತೊಂದು ವಿಘ್ನವು ಧುತ್ತೆಂದು ಬಂದಿತು. ರಾಣಿಯು ಚಂದ್ರನ ಪೂಜೆಗೋಸುಗ ಬರುವವಳಿದ್ದಳು. ಅವಳು ತೀರ

ಹತ್ತಿರದಲ್ಲಿಯೇ ಬರತೊಡಗಿದ್ದಳು. ಕೈಯಲ್ಲಿ ದೀವಟಿಗೆಗಳನ್ನು ಹಿಡಿದು ಕೊಂಡು ದಾಸಿಯರೂ, ಚೋಪದಾರಿಣಿಯರೂ 'ರಾಣಿಯವರೇ, ಹೀಗೆ ಬನ್ನಿ' ಎಂದು ಬಿನ್ನವಿಸುತ್ತ ಬರುತ್ತಿದ್ದರು. ಆ ಶಬ್ದಗಳನ್ನು ಕೇಳಿ ಉರ್ವಶಿ ಚಿತ್ರಲೇಖೆಯರ ಜೀವ ಹಿಡಿದುಬಿಟ್ಟಂತಾಯಿತು. ಅದರಿಂದ ಅವರು ಪ್ರಕಟ ರಾಗದೆ ಗುಪ್ತವೇಷದಲ್ಲಿಯೇ ಉಳಿಯಬೇಕಾಯಿತು.

ರಾಣಿಯು ಸಮೀಪಕ್ಕೆ ಬರುತ್ತಿರುವದನ್ನು ಕಂಡು ಮಾಣವಕನು 'ಮಹಾರಾಜ, ನಿಮ್ಮ ರಾಣಿಯವರು ಇಲ್ಲಿಯೇ ಬರುತ್ತಿದ್ದಾರೆ. ಕಾರಣ ಕೆಟ್ಟ ಮೋರೆಯನ್ನು ಮಾಡಿ ಕುಳಿತುಕೊಳ್ಳಬಾರದು. ಆನಂದಿತ ಮುಖ ಮುದ್ರೆಯನ್ನು ತಂದುಕೊಂಡು ಅವಳ ದೃಷ್ಟಿಗೆ ಬೀಳಬೇಕು. ಇಲ್ಲದಿದ್ದರೆ ನಿಮ್ಮ ಹೂರಣವೆಲ್ಲ ಹೊರಬಿದ್ದೀತು' ಎನ್ನಲಾಗಿ ರಾಜನು 'ನೀನೂ ಬಹಳ ನಮ್ರನಾಗಿ ಕುಳಿತುಕೋ' ಎಂದು ಮಾಣವಕನನ್ನು ಎಚ್ಚರಿಸಿದನು.

'ಚಿತ್ರಲೇಖೆಯೇ, ನಾವಿಲ್ಲಿದ್ದುಕೊಂಡು ಏನು ಮಾಡುವದಿದೆ ?'

ಚಿತ್ರಲೇಖೆಯು 'ದುಃಖಿತಳಾಗಬೇಡ. ನಿನಗೆ ಸ್ವಲ್ಪ ಅವಕಾಶವುಂಟಾ ಗಿದ್ದರೂ ರಾಣಿಯ ಕಡೆಗೆ ನೋಡಿದರೆ—ಅವಳೇನು ರಾಜನನ್ನು ರಮಿಸುವದ ಕ್ಕೆಂದು ಬಂದಂತೆ ಕಾಣುವದಿಲ್ಲ. ಅವಳ ವೇಷದಿಂದ ಅವಳು ವ್ರತಸ್ಥಳಿರ ಬೇಕೆಂದು ತೋರುತ್ತದೆ. ಆದಕಾರಣ ಹೆಚ್ಚು ಹೊತ್ತು ಅವಳು ಇಲ್ಲಿ ನಿಲ್ಲ ಲಾರಳು' ಎಂದು ಉರ್ವಶಿಗೆ ಹೇಳುತ್ತಿರುವಷ್ಟರಲ್ಲಿ ಪೂಜಾಸಾಮಗ್ರಿ, ಫಲಹಾರದ ಸಾಹಿತ್ಯದೊಂದಿಗೆ ದಾಸಿಯರಿಂದೊಡಗೂಡಿ ರಾಣಿಯು ಗಚ್ಚಿಯ ಮೇಲೆ ಬಂದೇಬಿಟ್ಟಳು. ವಸುಮತಿ ರಾಣಿಯು ಚಂದ್ರನ ಕಡೆಗೆ ನೋಡಿ 'ಈ ಮೃಗಲಾಂಛನವುಳ್ಳ ಚಂದ್ರಮನು ಈಗ ರೋಹಿಣಿಯ ಯೋಗದಿಂದ ಬಲು ಶೋಭಾಯಮಾನನಾಗಿ ಕಾಣುತ್ತಿದ್ದಾನೆ' ಎಂದಂದಳು.

ಇದನ್ನು ಕೇಳಿ ಪ್ರಸಂಗಾವಧಾನ ಚತುರಿಯಾದ ನಿಪುಣಿಕೆಯು 'ರಾಣಿ ಯವರು ರಾಜನ ಬಳಿಗೆ ಹೋದರೆಂದರೆ ನೀವೂ ಹಾಗೆಯೇ ಕಾಣುತ್ತೀರಿ' ಎಂದಳು.

ರಾಣಿಯವರ ಸಂಗಡ ಬಂದಂಥ ಫಲಹಾರದ ತಾಟುಗಳು ಪೂರಾ ತುಂಬಿದ್ದನ್ನು ಕಂಡು ಮಾಣವಕನು 'ರಾಜನೇ, ಬಾಗಿಣವನ್ನೂ ಕೊಡುವ ಸಿದ್ಧತೆಯಿದೆ—ಎಂಬಂತೆ ಕಾಣುತ್ತಿದೆ. ನೀನು ಪ್ರಾರ್ಥಿಸಿಕೊಳ್ಳದಿದ್ದರೂ

ಚಂದ್ರನ ವ್ರತದ ನಿಮಿತ್ತವಾಗಿ ಅವಳು ಸಿಟ್ಟನ್ನು ಬಿಟ್ಟಿದ್ದರಿಂದ ನನ್ನ ಕಣ್ಣಿಗೆ ಹಬ್ಬವಾಗಿದೆ ' ಎಂಬದನ್ನು ರಾಜನು ನಗುತ್ತ ಕೇಳಿ ' ನೀನಂದಂತೆ ಆ ಎರಡೂ ಸಂಗತಿಗಳು ಸಂಭವಿಸುವಂತಿವೆ. ಆದರೂ ನಿನ್ನ ಎರಡನೆಯ ಮಾತೇ ನನಗೆ ದಿಟವೆಂದೆನಿಸುತ್ತಿದೆ. ಯಾಕೆಂದರೆ ಈಗ ಅವಳು ಬಿಳಿ ವಸ್ತ್ರವನ್ನುಟ್ಟಿದ್ದಾಳೆ. ವಿಶೇಷ ಅಲಂಕಾರಗಳನ್ನು ಹಾಕಿಕೊಳ್ಳದೆ ತೀರ ಆವಶ್ಯಕವಾದ ಮಂಗಲಕಾರಕ ಆಭರಣಗಳನ್ನಷ್ಟೇ ಧರಿಸಿಕೊಂಡಿದ್ದಾಳೆ. ಮುಡಿಯಲ್ಲಿ ಸುವಾಸನೆಯುಳ್ಳ ಹೂಗಳನ್ನು ಮುಡಿದುಕೊಳ್ಳದೆ ದೂರ್ವಾಂಕುರಗಳನ್ನಷ್ಟೇ ಧರಿಸಿದ್ದಾಳೆ. ವ್ರತದ ನಿಮಿತ್ತದಿಂದ ತನ್ನ ಹಟವನ್ನು ಬಿಟ್ಟು ಅವಳು ನನ್ನ ಮೇಲೆ ಪ್ರಸನ್ನಳಾಗಿದ್ದಾಳೆಂಬದು ಅವಳ ಶರೀರದ ಮೇಲಿಂದ ಕಾಣಬರುತ್ತದೆ ' ಎಂದನು.

ಇಬ್ಬರೂ ಈ ಪ್ರಕಾರವಾಗಿ ಮಾತನಾಡುತ್ತಿರುವಾಗಲೇ ರಾಣಿಯು ರಾಜನ ಬಳಿಗೆ ಬಂದು ' ಮಹಾರಾಜರಿಗೆ ಜಯಜಯಕಾರವಿರಲಿ ! ' ಎಂದ ಮೇಲೆ ಉಳಿದ ರಾಣಿಯ ಪರಿವಾರವೂ ರಾಜನಿಗೆ ವಂದನೆಗಳನ್ನರ್ಪಿಸಿತು.

ವಸ್ತುತಃ ರಾಣಿಯು ಮಾಣವಕನಿಗೆ ನಮಸ್ಕಾರ ಮಾಡದಿದ್ದರೂ ಅವನೇ ಮುಂದೆಬಿದ್ದು ' ನಿನಗೆ ಕಲ್ಯಾಣವಾಗಲಿ ' ಎಂದು ಹರಸಿದನು. ಆಗ ರಾಜನು ಅವಳನ್ನು ಬರಮಾಡಿಕೊಂಡು ಕೈಹಿಡಿದು ತನ್ನ ಆಸನದಲ್ಲಿ ಕುಳ್ಳಿರಿಸಿಕೊಂಡನು.

ವಸುಮತಿರಾಣಿಯು ನಿಜವಾಗಿಯೇ ರಾಣೀಪದಕ್ಕೆ ತೀರ ಒಪ್ಪುವಂತೆ ಇದ್ದಳು; ತನ್ನ ಗಂಡನನ್ನು ಅತ್ಯಂತ ಪ್ರೀತಿಸುತ್ತಿದ್ದಳು. ಶಾಂತವೂ ಗಂಭೀರವೂ ಆದ ಆ ದೇವತೆಯನ್ನು ಕಂಡು ಉರ್ವಶಿಯು ' ಇವಳಿಗೆ ದೇವಿ ಎಂದೆನ್ನುವದು ಯಥಾಯೋಗ್ಯವೇ ಇದೆ. ತನ್ನ ತೇಜಸ್ಸಿನಿಂದ ರಾಜಿಸುವ ಇವಳು ಮಹೇಂದ್ರನ ಸ್ತ್ರೀಯಾದ ಶಚಿಯಗಿಂತಲೂ ಯಾವ ವಿಧದಿಂದಲೂ ಕಡಮೆ ಇರುವದಿಲ್ಲ ' ಎನ್ನಲಾಗಿ ಚಿತ್ರಲೇಖೆಯು ' ಇಂಥ ಮಾತುಗಳನ್ನಾಡಲು ನಿನಗೆ ಇನ್ನೊಂದು ಬಾಯಿಯಿರುವದಲ್ಲ ! ' ಎಂದು ನಗೆಯಾಡಿದಳು.

ಇತ್ತ ವಸುಮತಿ ರಾಣಿಯು ' ಆರ್ಯಪುತ್ರರೊಂದಿಗೆ ಒಂದು ವ್ರತವನ್ನು ಸಮಾಪ್ತಗೊಳಿಸಬೇಕಾಗಿರುವದರಿಂದ ಒಂದು ಗಳಿಗೆ ತೊಂದರೆ ಕೊಡಬೇಕಾಗಿ ಬಂದಿದೆ. ದಯವಿಟ್ಟು ಸಹನಮಾಡಿಕೊಳ್ಳಬೇಕಾಗಿ ಬಿನ್ನಹ '

ಎಂದೆನ್ನಲು ರಾಜನು 'ಹಾಗೆನ್ನಬೇಡ. ಇದು ನನ್ನ ಮೇಲೆ ಅನುಗ್ರಹವೇ ಇದೆ. ತೊಂದರೆಯಲ್ಲವೇ ಅಲ್ಲ' ಎಂದನು.

ಮಾಣವಕನು 'ರಾಜನೇ, ಬಾಗಿನಗಳನ್ನು ತೆಗೆದುಕೊಳ್ಳುವ ನಿಮಿತ್ತ ದಿಂದ ನಿನಗೆ ತೊಂದರೆಯಾದರೂ ಅಡ್ಡಿಯೇನಿದೆ ?' ಎಂದು ನಡುವೆ ಬಾಯಿ ಹಾಕಿದನು.

'ನಿನ್ನ ವ್ರತದ ಹೆಸರೇನು ?' ಎಂಬ ರಾಜನ ಪ್ರಶ್ನೆಯನ್ನು ಕೇಳಿ ರಾಣಿಯು ನಿಪುಣಿಕೆಯ ಕಡೆಗೆ ದೃಷ್ಟಿಯನ್ನು ಬೀರಿದಳು. ಆ ಸೂಚನೆ ಯನ್ನು ತಿಳಿದುಕೊಂಡು ನಿಪುಣಿಕೆಯು 'ಮಹಾರಾಜರೇ, ಈ ವ್ರತಕ್ಕೆ ಪ್ರಿಯ ಪ್ರಸಾದನ–ವೆಂದರೆ ಪತಿಯನ್ನು ಪ್ರಸನ್ನ ಮಾಡಿಕೊಳ್ಳುವುದು- ಎಂಬ ಹೆಸರಿದೆ' ಎಂದಳು.

ರಾಜನು ರಾಣಿಯ ಕಡೆಗೆ ಹೊರಳಿ 'ಅದು ಹಾಗಿದ್ದರೆ ಕಮಲದ ದೇಟಿನಂತಿರುವ ನಿನ್ನ ಕೋಮಲ ಶರೀರವನ್ನು ಈ ನಿಮಿತ್ಯವಾಗಿ ಯಾಕೆ ಬಳಲಿಸುವೆ ? ನೀನು ಪ್ರಸನ್ನಳಾಗಬೇಕೆಂದು ಇಚ್ಛಿಸುವ ಈ ನಿನ್ನ ದಾಸ ನನ್ನು ಪ್ರಸನ್ನೀಕರಿಸಿಕೊಳ್ಳುವ ಈ ವ್ಯರ್ಥ ಪ್ರಯತ್ನವೇಕೆ ?' ಎಂಬ ಮಮ ತೆಯ ಮಾತುಗಳನ್ನು ಕೇಳಿ, ಉರ್ವಶಿಯು ನಾಲಿಗೆಯನ್ನು ಕಚ್ಚಿ ಮುಗುಳು ನಗುತ್ತ 'ಚಿತ್ರಲೇಖೆಯೇ, ಇವನು ಈ ತನ್ನ ಹೆಂಡತಿಯ ಮೇಲೆ ಎಷ್ಟು ಪ್ರೀತಿಯುಳ್ಳವನಾಗಿರುವನಲ್ಲ ! ಇದೇನು ?' ಎಂದಳು.

'ಹುಚ್ಚಿಯೇ, ನಿನಗೆ ಈ ವಿಲಾಸೀ ಪುರುಷನ ಮನಸು ಇನ್ನೂ ಗೊತ್ತಾಗಿಲ್ಲವೇ ? ಪರಸ್ತ್ರೀಯರಲ್ಲಿ ಯಾರ ಹೃದಯವು ನಟ್ಟುಹೋಗಿರು ವದೋ ಅಂಥ ಪುರುಷರು ತಮ್ಮ ಹೆಂಡಂದಿರಲ್ಲಿ ಇಲ್ಲದ ಪ್ರೇಮವನ್ನು ಪ್ರಕಟಗೊಳಿಸುತ್ತಾರೆ' ಎಂದು ಸೂಚ್ಯವಾಗಿ ಅವಳಿಗೆ ಸಮಾಧಾನವನ್ನು ಹೇಳಿದಳು.

ಇತ್ತ ರಾಣಿಯು 'ರಾಜರೇ, ಆ ವ್ರತದ ಪ್ರಭಾವದ ಫಲವೇ ಇದು. ತಾವು ನನ್ನೊಡನೆ ಸವಿಮಾತುಗಳನ್ನಾಡುತ್ತಿರುವದೂ ಈ ವ್ರತದ ಪುಣ್ಯ ದಿಂದಲೇ' ಎಂದೆನ್ನಲಾಗಿ, ಮಾಣವಕನು ನಡುವೇ ಅಡ್ಡಬಾಯಿ ಹಾಕಿ 'ರಾಜನೇ, ಇನ್ನು ನೀನು ಸುಮ್ಮನೆ ಕುಳಿತುಕೋ. ನೀನೀಗ ಚೆನ್ನಾಗಿ

ಭಾಷಣ ಮಾಡಿರುವಿ. ಅದನ್ನು ಖಂಡಿಸುವದು ಯುಕ್ತವಾಗಲಾರದು ' ಎಂದನು.

ರಾಜನನ್ನು ಸಂತೋಷಪಡಿಸುವದಕ್ಕಿಂತ ಅವನ ಗೆಳೆಯ ಮಾಣವಕನನ್ನು ಸಂತೋಷಗೊಳಿಸುವದು ಅತ್ಯಾವಶ್ಯಕವಿದೆ. ಯಾಕೆಂದರೆ ದೊಡ್ಡ ದೊಡ್ಡ ಮನೆತನದ ಗಂಡಹೆಂಡಂದಿರಲ್ಲಿ ಅನರ್ಥವನ್ನುಂಟು ಮಾಡಲು ಅವರ ಹತ್ತಿರವಿರುವ ಇಂಥ ಮನುಷ್ಯರೇ ಕಾರಣರಾಗುತ್ತಾರೆ. ಈ ಮಾತು ರಾಣಿಯ ಲಕ್ಷ್ಯದಲ್ಲಿ ಇದ್ದಿಲ್ಲವೆಂತಲ್ಲ. ಮಾಣವಕನನ್ನು ಸಂತುಷ್ಟಿಗೊಳಿಸಲು ಸವಿಸವಿ ತಿಂಡಿ-ತಿನಿಸುಗಳಾದರೆ ತೀರಿತು. ರಾಣಿಯಂತೂ ಅವುಗಳನ್ನು ಯಥೇಷ್ಟವಾಗಿ ತಂದೇ ಇದ್ದಳು. ಮಾಣವಕನ ಭಾಷಣವನ್ನು ಕೇಳಿ ರಾಣಿಯು ತನ್ನ ದಾಸಿಯರಿಗೆ ' ಆ ಪೂಜಾಸಾಹಿತ್ಯ ಹಾಗೂ ಫಲಹಾರದ ಸಾಮಗ್ರಿಗಳನ್ನು ಇತ್ತ ಕೊಡಿರಿ. ಪೂಜೆಯ ಸಿದ್ಧತೆ ನಡೆಯಲಿ. ಇಲ್ಲಿ ಚಂದ್ರನ ಪ್ರಕಾಶವು ಸ್ವಚ್ಛವಾಗಿ ಬಿದ್ದಿದೆ. ನಾನು ಅದನ್ನು ಪೂಜಿಸುತ್ತೇನೆ ' ಎನ್ನಲಾಗಿ ದಾಸಿಯರು ರಾಣಿಯ ಮುಂದೆ ಎಲ್ಲ ಸಾಮಗ್ರಿಯನ್ನು ತಂದಿರಿಸಿದರು. ರಾಣಿಯು ಗಂಧ, ಪುಷ್ಪ ಮೊದಲಾದವುಗಳಿಂದ ಚಂದ್ರನ ಪೂಜೆಯನ್ನು ಮಾಡಿ ' ದಾಸಿಯರೇ, ಫಲಹಾರದ ತಾಟನ್ನು ತೆಗೆದುಕೊಂಡು ಆರ್ಯ ಮಾಣವಕನ ಪೂಜೆಯನ್ನು ಉಂಡಿಗಳಿಂದ ಮಾಡಿರಿ. ಆ ಮುದುಕ ಚೋಪದಾರನಿಗೂ ಒಂದಿಷ್ಟು ಕೊಡಿರಿ ' ಎಂದು ಆಜ್ಞಾಪಿಸಿದಳು.

ರಾಣಿಯ ಆಜ್ಞೆಯಂತೆಯೇ ದಾಸಿಯರು ಫಲಹಾರದ ಪದಾರ್ಥಗಳನ್ನು ಮಾಣವಕನ ಮುಂದಿರಿಸಿ ' ಭಟ್ಟರೇ, ರಾಣಿಯವರು ತಮಗೆ ಇವೆಲ್ಲವುಗಳ ಬಾಗಿನವನ್ನು ಕೊಟ್ಟಿದ್ದಾರೆ. ದಯವಿಟ್ಟು ಸ್ವೀಕರಿಸಬೇಕೆಂದು ಪ್ರಾರ್ಥಿಸಿಕೊಂಡಿದ್ದಾರೆ ' ಎಂದು ಹೇಳಲಾಗಿ, ಆ ತಿಂಡಿಯ ಪದಾರ್ಥಗಳನ್ನು ನೋಡಿ ಅತ್ಯಾನಂದಿತನಾದ ಮಾಣವಕನು ಒಮ್ಮೆಲೆ ಆ ತಾಟನ್ನೆತ್ತಿ ' ರಾಣಿಯೇ ನಿನಗೆ ಕಲ್ಯಾಣವಾಗಲಿ ! ಈ ವ್ರತದ ಪೂರ್ಣ ಫಲವು ನಿನಗಾಗಲಿ ' ಎಂದು ಬಾಯಿ ತುಂಬ ಹರಸಿದನು. ಆ ಚೋಪದಾರನೂ ಫಲಹಾರ ಪದಾರ್ಥಗಳನ್ನು ತೆಗೆದುಕೊಂಡು ರಾಣಿಯನ್ನು ಕೊಂಡಾಡಿದನು. ಹೀಗೆ ಉಳಿದವರೆಲ್ಲರನ್ನೂ ಸಮಾಧಾನ ಪಡಿಸಿ ರಾಣಿಯು ರಾಜನ ಕಡೆಗೆ ದೃಷ್ಟಿಬೀರಿ ' ಇತ್ತ ಕಡೆಗೆ ಗಮನಿಸಬೇಕು ' ಎಂದಳು.

' ಓಹೋ ಆಜ್ಞೆಯೇನು ? ಹೇಳು. ನಾನು ಸಿದ್ಧನೇ ಇರುವೆ 'ನೆಂದು ಹೇಳಿದ ಮೇಲೆ ರಾಣಿಯು ರಾಜನನ್ನು ಪೂಜಿಸಿ, ಕರಗಳನ್ನು ಜೋಡಿಸಿ ' ದೇವತೆಗಳ ದಂಪತಿಗಳಾದ ಚಂದ್ರ, ರೋಹಿಣಿಯರನ್ನು ಸಾಕ್ಷಿಯಾಗಿಟ್ಟು ಕೊಂಡು ಆರ್ಯಪುತ್ರರನ್ನು ಪ್ರಸನ್ನೀಕರಿಸಿಕೊಂಡಿದ್ದೇನೆ. ಇಂದಿನಿಂದ ಆರ್ಯಪುತ್ರರು ಯಾವ ಸ್ತ್ರೀಯನ್ನು ಅಪೇಕ್ಷಿಸುತ್ತಿರುವರೋ ಮತ್ತು ಯಾವಳು ಆರ್ಯಪುತ್ರರ ಸಮಾಗಮವನ್ನು ಬಯಸುತ್ತಿರುವಳೋ ಅಂಥವ ಳೊಡನೆ ಮನಸಿಗೆ ಬಂದಂತೆ ವರ್ತಿಸಲಿ. ನಾನು ಈ ಕಾರ್ಯದಲ್ಲಿ ಯಾವ ವಿಧದಿಂದಲೂ ಅಡ್ಡಿ ಆತಂಕಗಳನ್ನೊಡ್ಡುವದಿಲ್ಲ ' ಎಂದು ತನ್ನ ಮನದಿಂಗಿತ ವನ್ನು ಪ್ರಕಟಗೊಳಿಸಿದಳು.

ರಾಣಿಯ ಮಾತು ಯಾವ ಸ್ತ್ರೀಯೆಂಬುದನ್ನು ಸ್ಪಷ್ಟಗೊಳಿಸಿರಲಿಲ್ಲ. ಅದರಿಂದ ಅದನ್ನು ಕೇಳಿದ ಉರ್ವಶಿಯು ಗಾಬರಿಗೊಂಡಳು. ಯಾಕೆಂದರೆ ವಿಲಾಸಿಯಾದ ಈ ರಾಜನು ಇನ್ನಾವಳಲ್ಲಿ ಆಸಕ್ತನಾಗಿರುವನೋ ಯಾರಿಗೆ ಗೊತ್ತು ! ಎಂದು ಸಂಶಯಪಟ್ಟುಕೊಂಡವಳಾಗಿ ' ರಾಣಿಯ ಮಾತಿನಲ್ಲಿ ಯಾವ ಸ್ತ್ರೀಯೆಂಬದು ಸ್ಪಷ್ಟವಿಲ್ಲ. ನಾನಂತೂ ನನ್ನ ಹೃದಯವನ್ನು ವಿಶ್ವಾಸ ಪೂರ್ವಕವಾಗಿ ಈ ರಾಜನಿಗೆ ಸಮರ್ಪಿಸಿಬಿಟ್ಟಿದ್ದೇನೆ.' ಎನ್ನಲಾಗಿ ಚಿತ್ರ ಲೇಖೆಯು ಅದನ್ನು ಕೇಳಿ ' ಸುಮ್ಮನೆ ಗಾಬರಿಯಾಗುವಿಯೇಕೆ ? ಉದಾರ ಹೃದಯಿಯಾದ ಈ ಪ್ರತಿವ್ರತಾ ಶಿರೋಮಣಿಯು ಅನುಮತಿಯನ್ನಿತ್ತ ಮೇಲೆ ಈ ರಾಜರ್ಷಿಯ ಸಮಾಗಮವು ನಿನಗೆ ನಿರ್ವಿಘ್ನತೆಯಿಂದ ಲಭಿಸುವದರಲ್ಲಿ ಸಂದೇಹವೂ ಇಲ್ಲ ' ಎಂದಳು.

ರಾಣಿಯು ರಾಜನಿಗೆ ಅನುಮತಿಯನ್ನಿತ್ತುದು ಸ್ವಸಂತೋಷದಿಂದಿರ ಲಿಕ್ಕಿಲ್ಲೆಂದು ಮಾಣವಕನ ಭಾವನೆಯಾಗಿತ್ತು. ಒಟ್ಟಿನ ಮೇಲೆ ರಾಜನು ಉರ್ವಶಿಯಲ್ಲಿ ತೀರ ಆಸಕ್ತನಾಗಿದ್ದಾನೆ. ಅವನ ಮನಸು ಹಿಂದೆಗೆಯುವದು ಸಾಧ್ಯವಿಲ್ಲ. ಹೀಗಿರುವಾಗ ಅವನ ಇಚ್ಛೆಯ ವಿರುದ್ಧ ನಡೆಯುವದರಿಂದ ಉಪಯೋಗವಾದರೂ ಏನು ? ಅವನಿಗೆ ಸಿಟ್ಟು ಬಂದರೆ ತನಗೆ ಪ್ರತಿಕೂಲ ನಾಗಬಹುದೆಂದು ಊಹಿಸಿ ರಾಣಿಯು ಅನುಮತಿಯನ್ನು ಕೊಟ್ಟು ತನ್ನ ಭಾರ ವನ್ನಿಳುಹಿಕೊಂಡಂತಿದೆ ಎಂದು, ಮಾಣವಕನು ರಾಜನ ಕಿವಿಯಲ್ಲಿ ಮೆಲ್ಲಗಿನ ದನಿಯಲ್ಲಿ ' ಸೆರೆಯಾಳಿನ ಹಿಂದಿರುವ ಸಿಪಾಯಿಯು ತನ್ನ ಕೈಗಳನ್ನು ಕತ್ತರಿಸಿ

ದಾಗ ಸಿರುಪಾಯನಾಗಿ ' ಹೋಗು, ಕ್ಷೇಮದಿಂದ ಹೋಗು, ಜೀವದಾನ ಮಾಡಿದ ಪುಣ್ಯವು ಬರಲಿ ಎಂಬಂತೆ ಇದಾದರೂ ಇದೆ ' ಎಂದನು.

' ರಾಣಿಯವರೇ, ತಾವನ್ನುವಂತೆ ರಾಜನು ತಮ್ಮಲ್ಲಿ ಉದಾಸೀನನಾಗಿರುವನೇ ' ಎಂದು ಮಾಣವಕನು ವಿಚಾರಿಸಿದನು.

' ಮೂಢನೇ, ನನ್ನ ಸುಖಕ್ಕೆ ತಿಲಾಂಜಲಿಯನ್ನು ಬಿಟ್ಟು ಆರ್ಯಪುತ್ರನಿಗೆ ಯಾವುದೇ ರೀತಿಯಿಂದಾದರೂ ಸುಖವು ದೊರೆಯಲೆಂದು ಹಾರೈಸುವೆನು. ಇಷ್ಟರ ಮೇಲಿಂದ ಅವನು ನನಗೆ ಪ್ರಿಯನು ಇರುವನೋ ಇಲ್ಲವೋ ಎಂಬುದನ್ನು ವಿಚಾರಮಾಡು ' ಎಂದಳು.

ಅದನ್ನು ಕೇಳಿ ರಾಜನು ' ಸಿಟ್ಟಿನ ಸ್ವಭಾವದವಳೇ, ನೀನು ನನಗೆ ಪರಸ್ತ್ರೀಯನ್ನು ಒದಗಿಸಲು ಸಮರ್ಥಳಿರುತ್ತೀ; ಆದರೆ ಹಾಗೆ ಮಾಡಿ ನನ್ನನ್ನು ನಿನ್ನ ದಾಸಾನುದಾಸನನ್ನಾಗಿ ಮಾಡಿಕೊಳ್ಳಬೇಕೆಂದು ಇಚ್ಛಿಸುವಿಯಾ ? ನೀನು ಹಾಗೆ ಭಾವಿಸುತ್ತಿದ್ದರೆ ನಿಜವಾಗಿ ನಾನೇನು ಹಾಗಿರುವದಿಲ್ಲ.' ಎಂದನು.

' ಹಾಗಿರ್ರಿ, ಅಥವಾ ಬಿಡಿರಿ. ಪ್ರಿಯ ಪ್ರಸಾದನವೆಂಬ ಹೆಸರಿನ ಈ ವ್ರತವನ್ನು ಮಾಡಿದ್ದೆ; ಅದೀಗ ಯಥಾಶಾಸ್ತ್ರವಾಗಿ ಸಮಾಪ್ತಗೊಂಡಿತು. ಇನ್ನು ನನ್ನ ಕೆಲಸ ತೀರಿತು. ದಾಸಿಯರೇ ನಡೆಯಿರಿ. ನಾವಿನ್ನು ಹೋಗೋಣ.'

ರಾಣಿಯು ಬಹಳ ಸಂತೋಷಭರಿಳಾಗಿ ಹೊರಟಿರಲಿಲ್ಲ. ರಾಜನ ಮನಸು ಉರ್ವಶಿಯ ಕಡೆಗೆ ಹರಿಯುತ್ತಿದ್ದುದರಿಂದ ಈಗ ರಾಣಿಯು ಅಲ್ಲಿ ಹೆಚ್ಚು ಹೊತ್ತು ಇರುವುದೂ ರಾಜನಿಗೆ ಬೇಡಾಗಿತ್ತು. ಆದರೂ ಅವಳನ್ನು ಒಲಿಸಿಕೊಳ್ಳುವ ಸಲುವಾಗಿ ರಾಜನು ' ಪ್ರಿಯೇ, ನೀನು ನನ್ನನ್ನು ಬಿಟ್ಟು ಹೋದಿಯೆಂದರೆ ನಿಜವಾಗಿಯೂ ನೀನು ನನ್ನನ್ನು ಪ್ರಸನ್ನಗೊಳಿಸದೆ ಹೋದೆ ಎಂದು ತಿಳಿಯುತ್ತೇನೆ ' ಎಂದನು.

' ನಾನು ನಿಮ್ಮ ಮಾತನ್ನು ಎಂದೂ ಮುರಿದಿರುವದಿಲ್ಲ; ಆದರೆ ಈಗ ವ್ರತದ ನಿಯಮಗಳಿಂದ ಬದ್ಧಿತಳಾದ್ದರಿಂದ ನಾನು ಹೋಗಲೇಬೇಕು ' ಎಂದೆಂದು ರಾಣಿಯು ದಾಸಿಯರೊಡನೆ ಹೊರಟೇಬಿಟ್ಟಳು.

ರಾಣಿಯು ಇಲ್ಲಿಂದ ಯಾವಾಗ ಕಾಲ್ದೆಗೆಯುವಳೋ ಎಂಬುದರ ಹಾದಿಯನ್ನೇ ನೋಡುತ್ತ ಉರ್ವಶಿಯು ಕಾಲಹರಣ ಮಾಡುತ್ತಿದ್ದಳು. ಆದರೂ ಆ ದಂಪತಿಗಳ ಸಂವಾದದಲ್ಲಿ ತನಗೆ ಯಾವ ಯಾವ ಮಾತುಗಳ ಸ್ಪಷ್ಟೀಕರಣ

ಬೇಕಾಗಿತ್ತೋ ಅದೆಲ್ಲವೂ ಸಹಜವಾಗಿ ಸಿಗುವದೆಂದು ಅವರ ಮಾತುಗಳನ್ನು ಬಹು ಲಕ್ಷ್ಯಪೂರ್ವಕವಾಗಿ ಅವಳು ಕೇಳುತ್ತಲಿದ್ದಳು. ರಾಣಿಯು ಹೊರಟು ಹೋದ ಕ್ಷಣವೇ ಉರ್ವಶಿಯು ಒಮ್ಮೆಲೆ ರಾಜನಿಗೆ ಬೆಟ್ಟಿಯಾಗಬೇಕಿತ್ತು. ಆದರೆ ಅವಳಿಗದೇಕೋ ಅಧೈರ್ಯವು ಆವರಿಸಿತ್ತು. ಉರ್ವಶಿಯು 'ಚಿತ್ರಲೇಖೆಯೇ, ಈ ರಾಜರ್ಷಿಯು ತನ್ನ ಹೆಂಡತಿಯ ಮೇಲೆ ಬಹಳೇ ಮಮತೆಯುಳ್ಳವನಾಗಿದ್ದಾನೆ. ಆದ್ದರಿಂದ ನಾನು ಅವನ ಹತ್ತಿರ ಹೋಗಬಾರದೆಂದು ನನ್ನ ಮನಸು ಹೇಳುತ್ತಿದೆ. ಆದರೂ ಏನು ಮಾಡಿದರೂ ಈ ಕ್ಷುದ್ರ ಮನಸು ಹಿಂದೆ ಸರಿಯದಾಗಿದೆ. ಇದಕ್ಕೆ ನಾನೇನು ಮಾಡಲಿ?' ಎಂದು ವಿಚಾರಿಸಿದಳು.

'ಯಾರ ಆಶೆಯು ಎಲ್ಲಿ ಸ್ಥಿರವಾಗಿದೆಯೋ ಅಲ್ಲಿಂದ ಅದನ್ನು ಕಿತ್ತೊಗೆಯುವದು ಎಂದಿಗಾದರೂ ಸಾಧ್ಯವಿದೆಯೇ ?' ಎಂದು ಚಿತ್ರಲೇಖೆಯು ಉರ್ವಶಿಯನ್ನು ನಿರುತ್ತರಳನ್ನಾಗಿ ಮಾಡಿದಳು.

ಇತ್ತ ರಾಜನು ಸುಮ್ಮನೆ ಕುಳಿತಿರುವದನ್ನು ಮಾಣವಕನು ನೋಡಿ 'ನಿನ್ನ ಮನಸ್ಸಿನಲ್ಲಿ ಏನಾದರೂ ಮಾತಾಡುವದಿದ್ದರೆ ಬಿಚ್ಚು ಮನಸಿನಿಂದ ಈಗ ಮಾತಾಡಿಬಿಡು. ರೋಗವು ಅಸಾಧ್ಯವೆಂದು ಕಂಡು ಬಂದ ಮೇಲೆ ವೈದ್ಯನು ರೋಗಿಯ ಕೈಬಿಡುವಂತೆ ಇಂದು ರಾಣಿಯು ನಿನ್ನನ್ನು ಎಷ್ಟು ಬೇಗನೆ ಬಿಟ್ಟುಹೊರಟಳು ಎನ್ನಲಾಗಿ ರಾಜನು 'ಅಹುದು; ಆದರೆ ಉರ್ವಶೀ—' ಎಂದು ಬಾಯ್ಬಿಟ್ಟು ಸಂಬೋಧಿಸಿದುದನ್ನು ಕೇಳಿ ಉರ್ವಶಿಯು 'ಎಷ್ಟು ಕೃತಾರ್ಥಳಾಗಿರುವೆನಲ್ಲ !' ಎಂದಂದುಕೊಂಡಳು.

'ಕಾಲಂದುಗೆಗಳ ಶಬ್ದವನ್ನಾದರೂ ನನ್ನ ಕಿವಿಯ ಮೇಲೆ ಬೀಳುವಂತೆ ಅವಳೇಕೆ ಮಾಡಬಾರದು ? ಅಥವಾ ನನ್ನ ಬೆನ್ನಹಿಂದೆ ಬಂದು ನನ್ನ ಕಣ್ಣುಗಳನ್ನೇಕೆ ಮುಚ್ಚಬಾರದು ? ಇಲ್ಲವೆ ಈ ಗಚ್ಚಿಯ ಮೇಲೆ ಇಳಿದು ಬಂದು ಭಯಭೀತಳಾಗಿ ಹೌಹಾರಿ ನಿಂತ ಅವಳನ್ನು ಅವಳ ಚಾಣಾಕ್ಷಳಾದ ಸಖಿಯು ಏಕೆ ಎಳೆದುಕೊಂಡು ಬರಬಾರದು ?' ಎಂಬ ರಾಜನ ಮಾತನ್ನು ಕೇಳಿದ ಚಿತ್ರಲೇಖೆಯು ತಡೆಯದೆ 'ಉರ್ವಶೀ, ಅವನು ಇಂಥ ಉದ್ಗಾರಗಳನ್ನು ತೆಗೆಯುತ್ತಿರುವದರಿಂದ ಇನ್ನು ಕಾಲ ವಿಲಂಬ ಮಾಡದೆ ಅವನ ಮನೋರಥವನ್ನು ಪೂರ್ಣಗೊಳಿಸು' ಎನ್ನಲಾಗಿ ಉರ್ವಶಿಯು ಕಿಂಚಿತ್ ಭಯದಿಂದ 'ಆ ಮನೋರಥವು ಯಾವುದು ?'

ಎಂದೆನ್ನುತ್ತ ತೀರ ಮೆಲ್ಲನೆ ಹೆಜ್ಜೆಯಿಕ್ಕುತ್ತ ಬೆನ್ನುಹಿಂದೆ ಹೋಗಿ ಒಮ್ಮೆಲೆ ರಾಜನ ಕಣ್ಣುಗಳನ್ನು ಮುಚ್ಚೇಬಿಟ್ಟಳು. ಇತ್ತ ಚಿತ್ರಲೇಖೆಯು ಮಾಣವಕನಿಗೆ ಅವಳಾರೆಂಬುದನ್ನು ಹೇಳಕೂಡದೆಂದು ಎಚ್ಚರಿಕೆಯನ್ನು ಕೊಟ್ಟಳು.

ಕಣ್ಣು ಮುಚ್ಚಿದ ಕೈಯ ಸ್ಪರ್ಶಾನುಭವವನ್ನು ತೆಗೆದುಕೊಂಡು ರಾಜನು 'ಮಾಣವಕನೇ, ಈ ಕೈಯು ನಾರಾಯಣ ಮುನಿಯ ತೊಡೆಯಿಂದ ಉತ್ಪನ್ನಳಾದ ಉರ್ವಶಿಯ ಕೈಯಂತೆನಿಸುವದು' ಎನ್ನಲಾಗಿ ಮಾಣವಕನು 'ಅದು ನಿನಗೆ ಹೇಗೆ ತಿಳಿಯಿತು ?' ಎಂದು ವಿಚಾರಿಸಿದನು.

'ಅದರಲ್ಲೇನು ಮಹಾ ವಿಚಾರವಿದೆ ? ಯಾಕೆಂದರೆ ಹಾಗಿರದಿದ್ದರೆ ಕೈಯ ಸ್ಪರ್ಶವಾದ ಯೋಗದಿಂದಲೇ ನನ್ನ ಮೈಯಲ್ಲಿ ಬೆವರು ಬಿಟ್ಟು ರೋಮಾಂಚನವೆದ್ದುದೇಕೆ ? ಕುಮುದವು ಸೂರ್ಯನ ಕಿರಣಗಳಿಂದ ಎಂದೂ ವಿಕಸಿತವಾಗುವದಿಲ್ಲ. ಅದಕ್ಕೆ ಚಂದ್ರನೇ ಬೇಕಲ್ಲವೇ ?'

ಇತ್ತ ಉರ್ವಶಿಯು 'ಇದೇನು ! ವಜ್ರಲೇಪದಿಂದ ಕೂಡಿಸಿದ ಹಾಗೆ ನನ್ನ ಕೈಗಳೆರಡೂ ಸಿಕ್ಕುಬಿದ್ದಿವೆ. ಏನು ಮಾಡಿದರೂ ಅಲ್ಲಿಂದ ಅವು ಕೀಳಲಾರದಾಗಿವೆ' ಎಂದೆನ್ನುತ್ತ ರಾಜನ ಕಣ್ಣುಗಳ ಮೇಲಿನ ಕೈಗಳನ್ನು ತೆಗೆದು ಪ್ರೇಮ, ಭಯಗಳಿಂದ ಸಂಕೋಚಪಟ್ಟು ಅವಳೇ ತನ್ನ ಕಣ್ಣುಗಳನ್ನು ಮುಚ್ಚಿಕೊಂಡಳು. ರಾಜನು ಅವಳನ್ನು ತನ್ನ ಕಡೆಗೆ ಸೆಳೆದುಕೊಂಡನು. ಆಗ ಅವಳು ಕಣ್ತೆರೆದು 'ರಾಜನಿಗೆ ಜಯಜಯಕಾರವಿರಲಿ' ಎಂದಳು.

ಚಿತ್ರಲೇಖೆ 'ಎಲ್ಲಾ ಕ್ಷೇಮವಷ್ಟೇ ?' ಎಂದು ವಿಚಾರಿಸಿದಳು.

'ಎಲ್ಲವೂ ಸೌಖ್ಯವಾಗಿದೆ' ಎಂದು ರಾಜನೆನ್ನುವಷ್ಟರಲ್ಲಿ ಉರ್ವಶಿಯು ರಾಜನ ದೇಹಕ್ಕೆ ಅಂಟಿಕೊಂಡು 'ಚಿತ್ರಲೇಖೆಯೇ, ರಾಣಿಯು ನನಗೆ ಮಹಾರಾಜರನ್ನು ಕೊಟ್ಟಿದ್ದಾಳೆ. ಆದ್ದರಿಂದ ನಾನು ಅವರ ಸ್ವಂತ ಸ್ತ್ರೀಯಂತೆ ಅವರ ದೇಹಕ್ಕೆ ಅಂಟಿಕೊಂಡಿರುವೆನು. ನಾನು ಹೀಗೆ ಮಾಡಿದ್ದರಿಂದ ನೀನು ನನ್ನನ್ನು ದೋಷೈಕ ದೃಷ್ಟಿಯಿಂದ ನೋಡಲಾರಿ ಎಂದು ಭಾವಿಸಿದ್ದೇನೆ' ಎಂದಳು.

ಮಾಣವಕನು ಅವರಿಬ್ಬರನ್ನೂ ಕುರಿತು 'ನಿಮಗೆ ಈಗ ಸೂರ್ಯಾಸ್ತವಾಗಿಹೋಯಿತಲ್ಲ !' ಎಂದನು.

ರಾಜನು ಉರ್ವಶಿಯನ್ನು ಕಣ್ತುಂಬ ನೋಡಿ ' ರಾಣಿಯು ನನ್ನನ್ನು ನಿನಗೆ ಕೊಟ್ಟಿರಬೇಕೆಂದು ನನ್ನ ಶರೀರಕ್ಕೆ ಈಗ ಅಂಟಿಕೊಂಡಿರುವಿ ಎಂದೆ. ಆದರೆ ಮೊಟ್ಟ ಮೊದಲು ಬೆಟ್ಟಿಯಾದಾಗ ನೀನು ನನ್ನ ಹೃದಯವನ್ನು ಕದ್ದು ಬಿಟ್ಟೆ. ಆಗ ಯಾರ ಸಮ್ಮತಿಯನ್ನು ಪಡೆದುಕೊಂಡಿದ್ದಿ ?'' ಎಂದು ಕೇಳಿದನು. ರಾಜನ ಈ ಭಾಷಣವು ಬಹು ಸೂಕ್ಷ್ಮವೂ ಸೂಚ್ಯವೂ ಆಗಿತ್ತು. ಆದ್ದರಿಂದ ಉರ್ವಶಿಗೆ ಉತ್ತರವೇ ಹೊಳೆಯದ್ದರಿಂದ ಸುಮ್ಮನೆ ಇದ್ದುಬಿಟ್ಟಳು. ಅದನ್ನು ನೋಡಿ ಚಿತ್ರಲೇಖೆಯು ' ರಾಜನೇ, ಅವಳಂತೂ ನಿರುತ್ತರಳಾಗಿದ್ದಾಳೆ. ಈಗ ನಾನೊಂದು ವಿನಂತಿಯನ್ನು ಮಾಡಿಕೊಳ್ಳುತ್ತೇನೆ. ದಯವಿಟ್ಟು ಕೇಳಬೇಕು' ಎನ್ನಲಾಗಿ ' ಏನದು ಹೇಳಿಬಿಡು' ಎಂದು ಕೇಳಿದನು. ಚಿತ್ರಲೇಖೆಯು ' ಈಗ ವಸಂತ ಋತುವು ಮುಗಿಯ ಬಂದಿದೆ. ಮುಂದಿನ ಋತುವಿನಲ್ಲಿ ಸೂರ್ಯನ ಸೇವೆಯನ್ನುಮಾಡಬೇಕಾಗಿದ್ದರಿಂದ ನಾನು ಇಲ್ಲಿಂದ ಹೋಗಲೇಬೇಕು. ಆದ್ದರಿಂದ ಹೇಳಬೇಕೆಂಬುದೇನೂ ಇರುವದಿಲ್ಲ. ನನ್ನ ಗೆಳತಿಯಾದ ಉರ್ವಶಿಯು ಸ್ವರ್ಗಲೋಕಕ್ಕೆ ಬರುವದಕ್ಕೆ ಉತ್ಕಂಠಿತಳಾಗದಂತೆ ಅವಳನ್ನು ಇರಿಸಿಕೊಳ್ಳಬೇಕು ' ಎಂದಳು.

ಚಿತ್ರಲೇಖೆಯ ಈ ಮಾತು ಬಲು ಚಾಣಾಕ್ಷತನದ್ದಾಗಿತ್ತು. ನಿನ್ನಿಂದ ಅವಳಿಗೆ ಯಾವುದೇ ತರದ ತೊಂದರೆಯಾಗದಿದ್ದರೆ ಅವಳು ಇಲ್ಲಿಯೇ ಆನಂದದಿಂದಿರುವಳು. ಇಲ್ಲದಿದ್ದರೆ ಸ್ವರ್ಗಕ್ಕೆ ಬರಬೇಕೆಂಬ ಇಚ್ಛೆಯಾಗದಿರದು. ಆದ್ದರಿಂದ ಹಾಗಾಗದಂತೆ ನೋಡಿಕೊಳ್ಳಬೇಕೆಂದು ಅವಳು ಸೂಚಿಸಿದಳು. ಅದಕ್ಕೆ ಮಾಣವಕನು ' ನಿಮ್ಮ ಆ ಸ್ವರ್ಗದಲ್ಲಿ ನೆನೆಸುವಂಥದೇನಿದೆ ? ಅಲ್ಲಿ ತಿನ್ನಲೂ ಇಲ್ಲ. ಕುಡಿಯಲೂ ಇಲ್ಲ. ಅನಿಮಿಷ ನೇತ್ರಗಳಿಂದ ಮೀನದ ವ್ರತವನ್ನು ಧಾರಣಮಾಡಿಕೊಂಡು ಎಲ್ಲ ವೇಳೆಯನ್ನು ಕಳೆಯುವದಷ್ಟೇ ಅಲ್ಲವೇ ?'' ಎಂದು ನಗೆಯಾಡಿದನು.

ರಾಜನು ' ಮಾಣವಕನೇ, ಅಲ್ಲಿಯ ಸುಖಕ್ಕೆ ಉಪಮೆಯೇ ಇರುವದಿಲ್ಲ. ಅಂಥ ಸ್ವರ್ಗಸುಖದ ನೆನಪಾಗದಂತೆ ಮಾಡುವದು ನನ್ನಿಂದ ಹೇಗೆ ಸಾಧ್ಯ ? ಇಷ್ಟು ಮಾತ್ರ ಹೇಳಬಲ್ಲೆ — ಈ ಪುರೂರವನು ಬೇರಾವ ಸ್ತ್ರೀಯರಿಗೆ ಸಿಗತಕ್ಕಂಥವನಲ್ಲದಿದ್ದರೂ ಈ ಉರ್ವಶಿಯ ದಾಸನಾಗಿದ್ದಾನೆ. ಇದಕ್ಕೂ ಹೆಚ್ಚಿಗೆ ಹೇಳಲು ನನ್ನಿಂದ ಸಾಧ್ಯವೇ ಇಲ್ಲ ' ಎಂದನು. ಇದನ್ನು ಕೇಳಿ ಚಿತ್ರ

ಲೇಖೆಗೆ ಅತಿಶಯ ಆನಂದವಾಯಿತು. ಅದಕ್ಕವಳು 'ನನ್ನ ಮೇಲೆ ದೊಡ್ಡ ಉಪಕಾರ ಮಾಡಿದಿರಿ. ಇನ್ನೇನು ಹೇಳಬೇಕೆಂಬುವದೇ ನನಗುಳಿಯಲಿಲ್ಲ. ಉರ್ವಶೀ, ಇನ್ನು ಗಾಬರಿಗೊಳ್ಳದೆ ನನಗೆ ಹೋಗಲು ಅಪ್ಪಣೆಯನ್ನು ಕೊಡು' ಎಂದು ಕೇಳಿಕೊಂಡಳು.

ಅದನ್ನು ಕೇಳಿದ ಉರ್ವಶಿಯ ಮನಸಿನಲ್ಲಿಯೂ ಅವಳು ಹೋಗಬೇಕೆಂಬುದೇ ಇತ್ತು. ಯಾಕೆಂದರೆ ಸ್ತ್ರೀಪುರುಷರು ಸಮ್ಮಿಲಿತರಾಗುವಾಗ ಅಲ್ಲಿ ಬೇರಾರಾದರೂ ಇದ್ದರೆ ಪರಸ್ಪರರಿಗೂ ತೊಂದರೆಯಾಗುತ್ತದೆ. ಆದರೂ ಈ ಗೆಳತಿಯ ಅಗಲುವಿಕೆಯನ್ನು ತಡೆಯದೆ ಉರ್ವಶಿಯು ಅವಳನ್ನು ಬಿಗಿಯಾಗಿ ಅಪ್ಪಿಕೊಂಡು ಪ್ರೀತಿಯಿಂದ 'ಸಖಿಯೇ, ನನ್ನನ್ನು ಮರೆಯಬೇಡ' ಎಂದು ಪರೋಪರಿಯಿಂದ ಅವಳಿಗೆ ಹೇಳಿಕೊಂಡಳು.

'ಈ ಪುರೂರವನ ಸಂಗತಿಯಾದ ಮೇಲೆ ನಾನೇ ಆ ಮಾತನ್ನು ನಿನಗೆ ಹೇಳಬೇಕು. ಅದನ್ನು ಬಿಟ್ಟು ನನಗೇಕೆ ಹಾಗೆ ಹೇಳಿಕೊಳ್ಳುತ್ತೀ?' ಎಂದಂದು ರಾಜನಿಗೆ ವಂದಿಸಿ, ಉರ್ವಶಿಯನ್ನು ಅಪ್ಪಿಕೊಂಡು ಚಿತ್ರಲೇಖೆಯು ಹೊರಟುಬಿಟ್ಟಳು.

ಅವರಿಬ್ಬರಿಗೆ ಇನ್ನುಳಿದ ಆತಂಕವೆಂದರೆ ಮಾಣವಕ ಮಹಾಶಯನದು. ಅವನೇನು ಕಡಮೆ ತರಗತಿಯ ಜಾಣಾಕ್ಷನಲ್ಲವೆಂದೇ ಅವನು ರಾಜನನ್ನುದ್ದೇಶಿಸಿ 'ನಿನ್ನ ಮನೋರಥವು ಕೈಗೂಡಿದುದಕ್ಕೆ ನನಗೆ ಹಿಡಿಸಲಾರದಷ್ಟು ಪರಮಾನಂದವಾಗಿದೆ' ಎಂದನು.

ರಾಜನು ಉರ್ವಶಿಯನ್ನು ಹಿಡಿದು 'ನೋಡು, ಇದು ನನ್ನ ಮನೋರಥ ಸಿದ್ಧಿಯ ಫಲವು. ನೂರಾರು ಮಾಂಡಲಿಕ ರಾಜರು ನನ್ನ ಪಾದಗಳ ಮೇಲೆ ಹೊರಳಾಡುತ್ತಿರುವಂಥ ಈ ಪೃಥ್ವಿಯ ಏಕಛತ್ರಾಧಿಪತ್ಯವೂ ಕೂಡ ನನಗೆ ನಿನ್ನ ಮುಂದೆ ಕಃಪದಾರ್ಥವೆನಿಸುತ್ತಿದೆ. ಇಂದು ನಿನ್ನ ಚರಣಗಳ ದಾಸ್ಯತ್ವವನ್ನು ಸಂಪಾದಿಸಿಕೊಂಡು ನಾನು ಎಷ್ಟು ಕೃತಾರ್ಥನಾಗಿರುವೆನೋ ಅಷ್ಟು ಈ ರಾಜ್ಯದಿಂದ ನಾನು ಕೃತಾರ್ಥನಾಗಿರಲಿಲ್ಲ' ಎಂದು ಹೇಳಿದನು.

ಉರ್ವಶಿಯು 'ಈ ಬಗ್ಗೆ ಹೆಚ್ಚಿಗೇನನ್ನಾದರೂ ಹೇಳಬೇಕೆಂದರೆ ನನ್ನಿಂದ ಸಾಧ್ಯವೇ ಇಲ್ಲ' ಎಂದಳು.

ರಾಜನು ಉರ್ವಶಿಯ ಕೈಯನ್ನು ಹಿಡಿದು 'ಇದೇನು ಆಶ್ಚರ್ಯ ವಿದೆಯೋ ಯಾರಿಗೆ ಗೊತ್ತು! ಇಚ್ಛಿತ ವಸ್ತುವು ದೊರಕಿದ ಮೇಲೆ ಸದ್ಯಕ್ಕೆ ವಿರೋಧ ವಸ್ತುಗಳಾವವೂ ಉಳಿಯಲಿಲ್ಲ. ಯಾಕೆಂದರೆ ಈ ಮೊದಲು ಸಂತಾಪದಾಯಕವಾಗಿದ್ದ ಚಂದ್ರಕಿರಣಗಳು ಈಗ ನನ್ನ ಶರೀರಕ್ಕೆ ಆನಂದ ವನ್ನೀಯತೊಡಗಿರುವವು. ಪ್ರತಿಕೂಲವೆನಿಸಿದ್ದ ಮದನನ ಬಾಣವು ಈಗ ಅನು ಕೂಲವಾಗಿದೆ. ಈ ಹೊತ್ತಿನ ವರೆಗೆ ಪ್ರತಿಕೂಲವೆನಿಸುತ್ತಿದ್ದವುಗಳೆಲ್ಲವೂ ಈಗ ನಿನ್ನ ಸಮಾಗಮದಿಂದ ಅನುಕೂಲವಾಗಿ ಪರಿಣಮಿಸಿವೆ' ಎಂದನು.

'ನಿಮ್ಮ ಬಳಿಗೆ ಬರಲು ನನಗೆ ಬಹಳ ಹೊತ್ತು ಹಿಡಿಯಿತು. ನಿಮ್ಮನ್ನು ಬಹಳ ದಾರೀಕಾಯಿಸಿದ್ದರಿಂದ ನಾನು ಅಪರಾಧಿಯಾಗಿದ್ದೇನೆ' ಎಂದು ನುಡಿದ ಉರ್ವಶಿಯನ್ನು ಕುರಿತು ರಾಜನು 'ಸುಂದರೀ, ಹಾಗೆ ಮಾತನಾಡಬೇಡ. ಎಷ್ಟೋ ದುಃಖವನ್ನು ಭೋಗಿಸಿದ ಮೇಲೆ ಪ್ರಾಪ್ತ ವಾಗುವ ಸುಖವು ಬಲು ಆಹ್ಲಾದಕರವಿರುತ್ತದೆ. ಬಿಸಿಲಿನ ತಾಪಕ್ಕೆ ಬಳಲಿ ದವನಿಗೆ ವೃಕ್ಷದ ಛಾಯೆಯು ಹೇಗೆ ಶಾಂತಿದಾಯಕವಾಗಿದೆಯೋ ಹಾಗೆ ಈ ಸುಖವು ಶಾಂತಿದಾಯಕವಾಗಿದೆ' ಎಂದನು.

ಬಹಳ ಹೊತ್ತಾದುದನ್ನು ಕಂಡು ಮಾಣವಕನು 'ಉರ್ವಶೀ, ಸಂಧ್ಯಾಕಾಲದ ರಮಣೀಯ ಚಂದ್ರಕಿರಣಗಳ ಸೇವನೆಯನ್ನು ಬಹಳ ಹೊತ್ತಿನಿಂದ ತೆಗೆದುಕೊಂಡಿರುವಿ. ಇನ್ನು ಮೇಲೆ ಮನೆಯೊಳಗೆ ಹೋಗುವ ಸಮಯವಾಗಿದೆ' ಎನ್ನಲಾಗಿ ರಾಜನು 'ಈ ನಿನ್ನ ಸಖಿಗೆ ರಾಣೀವಾಸದ ದಾರಿಯನ್ನು ತೋರಿಸು' ಎಂದು ಹೇಳಿದನು.

ಅದರಂತೆ ಮಾಣವಕನು ಅವಳನ್ನು ಕರೆದುಕೊಂಡು ಹೊರಡಲನು ವಾದಾಗ ರಾಜನು 'ನನ್ನದೊಂದು ಪ್ರಾರ್ಥನೆಯಿದೆ' ಎಂದು ಹೇಳಲಾಗಿ ಉರ್ವಶಿಯು 'ಅದೇನು?' ಎಂದು ವಿಚಾರಿಸಿದಳು. ರಾಜನು 'ಮನೋ ರಥವು ಈಡೇರಲಿಲ್ಲೆಂದು ಈ ಮೊದಲಿನ ರಾತ್ರಿಗಳು ಬಹಳ ದೊಡ್ಡವಾಗಿ ಬೆಳೆಯುತ್ತಿದ್ದವು. ಅದರಂತೆ ಈಗ ನಿನ್ನ ಸಮಾಗಮವಾದ ಮೇಲೆ ಅವು ಹಾಗೆ ದೊಡ್ಡವಾದರೆ ನಾನು ನಿನಗೆ ಧನ್ಯವಾದಗಳನ್ನು ಅರ್ಪಿಸುತ್ತೇನೆ' ಎಂದನು.

೪

ಈಗ ರಾಜನಿಗೆ ಉರ್ವಶಿಯ ಸಮಾಗಮವು ಲಭಿಸಿದೆ. ಸಂತಾನವಾಗುವ ವರೆಗೆ ಪುರೂರವನ ಹತ್ತಿರ ಇರಬೇಕೆಂಬ ಇಂದ್ರನ ಆಜ್ಞೆಯಂತೆ ಉರ್ವಶಿಯು ಪುರೂರವನ ಸನ್ನಿಧಿಯಲ್ಲಿ ಅತ್ಯಾನಂದದಿಂದ ಇರತೊಡಗಿದಳು. ರಾಜನು ಅವಳನ್ನು ಪಟ್ಟದ ರಾಣಿಯನ್ನಾಗಿ ಮಾಡಿದನು. ದಿನಕ್ಕೊಂದು ಛಂದಾದ ಐಷಾರಾಮದಿಂದ ಅವರಿಬ್ಬರ ಜೀವನ ಸಂಗಮವು ನಡೆಯಿತು. ಮನಸಿಗೆ ಬಂದಂತೆ ಕ್ರೀಡೆಗಳನ್ನು ಮಾಡುತ್ತ ವಿಷಯ ಸುಖದಲ್ಲಿ ಅವರ ಕಾಲವು ಗತಿಸತೊಡಗಿತು. ರಾಜನು ಉರ್ವಶಿಯ ಸುಖಲೋಲುಪತೆಯಲ್ಲಿ ನಿಮಗ್ನನಾದ್ದರಿಂದ ರಾಜ್ಯಕಾರಭಾರಕ್ಕೆ ರಜೆಯನ್ನು ಕೊಟ್ಟಂತಾಯಿತು. ಹಗಲಿರುಳೂ ಅವನು ತನ್ನ ಜೀವನವನ್ನು ವಿಲಾಸದಲ್ಲಿ ಕಳೆಯತೊಡಗಿದನು. ಹೀಗೆ ಕಾಲವು ಕಳೆಯುತ್ತಿರಲು ಅವರಿಬ್ಬರ ಮನಸಿನಲ್ಲಿ ಗಂಧಮಾದನ ಪರ್ವತಕ್ಕೆ ಹೋಗಿ ಅಲ್ಲಿ ಕ್ರೀಡಾಸಕ್ತರಾಗಬೇಕೆಂಬ ವಿಚಾರವು ಬಂದಿತು. ರಾಜ್ಯದ ಭಾರವನ್ನೆಲ್ಲ ಮಂತ್ರಿಯ ಕೈಗೊಪ್ಪಿಸಿ ರಾಜನು ಉರ್ವಶಿಯೊಂದಿಗೆ ಆ ಪರ್ವತಕ್ಕೆ ಪ್ರಯಾಣ ಬೆಳಿಸಿದನು.

ಅಲ್ಲಿಗೆ ಹೋದನಂತರ ರಾಜನು ಆ ದೇವಭೂಮಿಯಲ್ಲಿ ದಿವ್ಯ ಮತ್ತು ಮಾನವೀ ತರದ ಪದಾರ್ಥಗಳ ಅನುಭವವನ್ನು ಪಡೆದನು. ಅಲ್ಲಿ ಶರೀರಕ್ಕೆ ಬೇಸರವೂ ದಣಿವೂ ಅನಿಸುವದಿಲ್ಲವಾದ್ದರಿಂದ ಅವನ ಕ್ರೀಡೆಯು ಅವಿಶ್ರಾಂತವಾಗಿ ಸಾಗಿತು. ಅವನು ಎಲ್ಲ ಕೆಲಸಬೊಗಸೆಗಳನ್ನು ಬದಿಗಿರಿಸಿ ಕೇವಲ ವಿಷಯ ರಸದಲ್ಲಿಯೇ ಈಸಾಡುವ ಯೋಜನೆಯನ್ನು ಮಾಡಿದ್ದನು. ಆದರೆ ಅದು ಬಹುಕಾಲ ಒಂದೇಸವನೆ ಸಾಗಲಿಲ್ಲ.

ವಿಷಯಾನಂದವು ಬಹುತೇಕವಾಗಿ ಪರಿಣಾಮದಲ್ಲಿ ದುಃಖಕಾರಕವಾಗುವುದರಿಂದ ಅದಕ್ಕೆ ಮೇಲಿಂದ ಮೇಲೆ ವಿಘ್ನಗಳೂ ಬರುತ್ತವೆಂಬ ಸತ್ಪುರುಷರ ವಾಕ್ಯಗಳು ಎಂದೂ ಸುಳ್ಳಾಗುವದಿಲ್ಲ. ಉರ್ವಶಿಯಂಥ ದಿವ್ಯ ಸ್ತ್ರೀಯೂ, ಪುರೂರವನಂಥ ಸರ್ವಗುಣ ಸಂಪನ್ನ ಪುರುಷನೂ, ಗಂಧಮಾದನದಂಥ ದಿವ್ಯಸ್ಥಾನವೂ ಸಮ್ಮಿಳಿತವಾದ ಮೇಲೆ ಅನುಕೂಲತೆಗಳಿಗೇನೂ ಕೊರತೆಯಿಲ್ಲದಿದ್ದರೂ ಕ್ರೀಡೆಯು ಭಂಗವಾಗುವ ಪ್ರಸಂಗವು ಒದಗಿಬಂದಿತು.

ಚಿತ್ರಲೇಖೆಯು ಉರ್ವಶಿಯನ್ನು ಪುರೂರವನ ವಶಕ್ಕೆ ಕೊಟ್ಟು ಸ್ವರ್ಗ ಲೋಕಕ್ಕೆ ತೆರಳಿದ ಮೇಲೆ ಅವಳು ಪ್ರತಿದಿನವೂ ಸೂರ್ಯನ ಆರಾಧನೆಯನ್ನು ಮಾಡತೊಡಗಿದಳು. ಅದರಂತೆ ಒಂದು ದಿನ ಸೂರ್ಯನ ಆರಾಧನೆಯನ್ನು ಮುಗಿಸಿಕೊಂಡು ಬರುತ್ತಿರುವಾಗ ಸಹಜನ್ಯೆ ಎಂಬ ಹೆಸರಿನ ಅವಳ ಗೆಳತಿಯು ಬೆಟ್ಟಿಯಾದಳು. ಚಿತ್ರಲೇಖೆಯು ತನ್ನ ಅತ್ಯಂತ ಪ್ರಿಯ ಸಖಿಯಾದ ಉರ್ವಶಿಯ ವಿಯೋಗ ವಿರಹದಿಂದ ಅತ್ಯಂತ ದುಃಖಿತಳಾಗಿದ್ದಳು. ಅವಳ ಮನಸು ಉದಾಸೀನವಾಗಿದ್ದು ಮೇಲಿಂದ ಮೇಲೆ ಅವಳಿಗೆ ಉರ್ವಶಿಯ ನೆನಪು ಆಗುತ್ತಿತ್ತು. ಉರ್ವಶಿಗೆ ದುಃಖದ ಪ್ರಸಂಗವು ಉಂಟಾಗಿರಬೇಕೆಂದು ಅವಳಿಗದೇಕೋ ಅನಿಸಿ ವ್ಯಾಕುಲಚಿತ್ತಳಾಗಿ, ಕಾಲೇಳದಂತಾಗಿದ್ದರಿಂದ ಅವಳು ಸರೋವರದ ದಂಡೆಯ ಮೇಲೆ ವಿಲಾಪಮಾಡುತ್ತ ಕುಳಿತುಕೊಂಡಿದ್ದಳು. ಅವಳು ತನ್ನಷ್ಟಕ್ಕೆ ತಾನೇ ಮನಸಿನಲ್ಲಿ ‘ ಪ್ರಿಯ ಸಖಿಯ ಅಗಲುವಿಕೆಯಿಂದ ದುಃಖಿತಳಾದ ಅವಳ ಸಖಿಯು ವ್ಯಾಕುಲಚಿತ್ತಳಾಗಿ, ಸೂರ್ಯಕಿರಣಗಳ ಸ್ಪರ್ಶದಿಂದ ಯಾವುದರೊಳಗಿನ ಕಮಲಗಳು ಪ್ರಫುಲ್ಲಿತವಾಗಿರುವವೋ ಅಂಥ ಸರೋವರದ ದಂಡೆಯ ಮೇಲೆ ಕುಳಿತು ವಿಲಾಪಮಾಡುತ್ತಿದ್ದಾಳೆ ’ ಎಂದಂದುಕೊಂಡಳು. ಅವಳು ಸುತ್ತೂ ಕಡೆಗೆ ದೃಷ್ಟಿಯನ್ನು ಬೀರಿ ಆ ಸರೋವರದೊಳಗಿನ ಎರಡು ಹಂಸಿಗಳನ್ನು ಕಂಡು ‘ ಸಹಚರಿಯ ದುಃಖದಿಂದ ಹುರುಪಳಿಸಿದ ಪ್ರಿಯಕರವಾದ ಹಂಸಗಳೆರಡೂ ಸರೋವರದ ದಂಡೆಯಮೇಲೆ ಕಣ್ತುಂಬ ನೀರು ತಂದು ದುಃಖವನ್ನು ಮಾಡುತ್ತಲಿವೆ ’ ಎಂದು ಮಾತನಾಡಿದಳು.

ಸಹಜನ್ಯೆಯೂ ಉರ್ವಶಿಯ ಗೆಳತಿಯಾಗಿದ್ದರೂ ಅವಳಿಗೆ ಉರ್ವಶಿಯ ಬಗ್ಗೆ ವಿವರವಾದ ಸುದ್ದಿಗಳೊಂದೂ ಗೊತ್ತಿರಲಿಲ್ಲ. ಚಿತ್ರಲೇಖೆಯು ದುಃಖ ಪಡುತ್ತಿರುವದನ್ನು ಕಂಡು ಸಹಜನ್ಯೆಯು ‘ ಚಿತ್ರಲೇಖೆಯೇ, ಬಾಡಿದ ಕಮಲದಂತೆ ನಿನ್ನ ಮುಖ ಕಾಂತಿಯು ಕಪ್ಪಿಟ್ಟು ಹೋಗಿದೆ. ಅದು ನಿನ್ನ ಹೃದಯವು ಸ್ವಸ್ಥವಿಲ್ಲೆಂದು ಸೂಚಿಸುತ್ತಲಿದೆ. ಆದಕಾರಣ ನಿನಗಾಗಿರುವ ದುಃಖವಾದರೂ ಯಾವುದು,? ಅದನ್ನು ಹೇಳಿದರೆ ನಾನೂ ನಿನ್ನ ದುಃಖದಲ್ಲಿ ಪಾಲುಗಾರಳಾಗುವೆನು ’ ಎನ್ನಲಾಗಿ ಚಿತ್ರಲೇಖೆಯು ‘ ಸಹಜನ್ಯೆಯೇ, ಅಪ್ಸರೆಯರ ವ್ಯವಸಾಯದ ನಿಮಿತ್ಯವಾಗಿ ನಾನು ಸೂರ್ಯನ ಆರಾಧನೆಯನ್ನು ಮಾಡುತ್ತಿರುವಾಗ

ಪ್ರಿಯ ಸಖಿಯಾದ ಉರ್ವಶಿಯು ನನ್ನ ಹತ್ತಿರ ಇಲ್ಲವಲ್ಲಾ ಎಂದು ಅವಳ ನೆನಪಿಗಾಗಿ ನನಗೆ ಬಲು ದುಃಖವೂ ಅವಳ ಭೆಟ್ಟಿಯ ಅಪೇಕ್ಷೆಯೂ ಆಗಿದೆ ' ಎಂದು ಹೇಳಿದಳು.

' ನಿಮ್ಮಿಬ್ಬರಲ್ಲಿಯೂ ಅಷ್ಟೊಂದು ಗಾಢವಾದ ಗೆಳೆತನವಿದೆ ಎಂಬವನ್ನು ನಾನು ಬಲ್ಲೆ. ಇರಲಿ, ಮುಂದೇನಾಯಿತು ?'

' ಈ ಪ್ರಕಾರವಾಗಿ ಮನಸು ಉದ್ವಿಗ್ನಗೊಂಡು ಸದ್ಯಕ್ಕೆ ಉರ್ವಶಿಯು ಯಾವ ಸ್ಥಿತಿಯಲ್ಲಿರುವಳೆಂಬದನ್ನು ತಿಳಿದುಕೊಳ್ಳಲು ನಾನು ಕೆಲವೊಂದು ಹೊತ್ತು ಧ್ಯಾನಸ್ಥಳಾಗಿ ಕುಳಿತೆನು. ಆಗ ನನಗೆ ಅವಳು ವಿಪರೀತ ಪರಿಸ್ಥಿತಿಯಲ್ಲಿರುವಳೆಂದು ಕಂಡುಬಂದಿತು.'

' ಅಂಥ ವಿಪರೀತ ಪರಿಸ್ಥಿತಿ ಯಾವುದೆಂಬವನ್ನು ಹೇಳಬಾರದೇ ?'

' ಉರ್ವಶಿಯು ಲಕ್ಷ್ಮಿಯಿಂದೊಡಗೂಡಿದ ವಿಷ್ಣುವಿನಂತೆ ಆ ರಾಜರ್ಷಿಯಾದ ಪುರೂರವನನ್ನು ಕರೆದುಕೊಂಡು ಗಂಧಮಾಧನವೆಂಬ ಕೈಲಾಸ ಪರ್ವತ ಪ್ರದೇಶದೊಳಗೆ ಕ್ರೀಡೆಯನ್ನು ಮಾಡಲು ಹೋಗಿದ್ದಳು.'

' ಅಹಹ ! ಇದಕ್ಕೇ ಅನ್ನಬೇಕು ಸಂಭೋಗ ಕ್ರೀಡೆ ಎಂದು ! ಗಂಧಮಾದನದಂಥ ದಿವ್ಯ ಸ್ಥಾನವಿಲ್ಲದಿದ್ದರೆ ಅದರ ಮಹತ್ವವಾದರೂ ಏನು ? ಹುಂ, ಮುಂದೇನಾಯಿತು ?'

' ಅಲ್ಲಿಗೆ ಹೋದನಂತರ ಗಂಧಮಾದನದಲ್ಲಿ ಮಂದಾಕಿನೀ ತೀರದಲ್ಲಿ ಉಸುಬಿನ ಪರ್ವತವನ್ನು ಮಾಡಿ ಅವರು ವಿಹರಿಸುತ್ತಿದ್ದರು. ಅಷ್ಟರಲ್ಲಿ ವಿದ್ಯಾಧರನೆಂಬವನ ಪ್ರೌಢೆಯಾದ ಮಗಳು ಉದಯವತೀ ಎಂಬವಳು ಅಲ್ಲಿಗೆ ಬಂದಳು. ಅವಳೂ ರೂಪಗುಣಸಂಪನ್ನತೆಯಿಂದ ಅಪ್ರತಿಮಳಾಗಿದ್ದಳು. ರಾಜನು ಅವಳಲ್ಲಿ ಆಸಕ್ತನಾಗದಿದ್ದರೂ ಅವನು ಅವಳನ್ನು ಬಹು ಲಕ್ಷ್ಯಪೂರ್ವಕವಾಗಿ ಏಕದೃಷ್ಟಿಯಿಂದ ನೋಡಿದನು. ಇದೇ ಆ ವಿಪತ್ತಿಗೆ ಮೂಲ ಕಾರಣವಾಯಿತು. ರಾಜನು ಮಾಡಿದುದು ಉರ್ವಶಿಗೆ ಸಹನವಾಗಲೆ ಇಲ್ಲ. ನೀನು ಉದಯವತಿಯಲ್ಲಿ ಆಸಕ್ತನಾಗಿರುವಿ ಎಂದು ರಾಜನಿಗೆ ದೋಷಾರೋಪವನ್ನು ಹೊರಿಸಿ, ಉರ್ವಶಿಯು ರಾಜನ ಮೇಲೆ ಕೋಪಾವಿಷ್ಟಳಾದಳು !

‘ ನಿಜವಾಗಿಯೇ ಉರ್ವಶಿಯು ಬಹಳ ಸಿಟ್ಟಿಗೇಳುವವಳು. ಅಹುದೋ ಅಲ್ಲವೋ ? ಸ್ವಲ್ಪವೂ ಕೊಂಕು ಅವಳಿಗೆ ಸಹನವಾಗದು. ಅದರಲ್ಲಂತೂ ಪ್ರಾಣಕ್ಕಿಂತಲೂ ಅಧಿಕವಾಗಿ ರಾಜನ ಮೇಲೆ ಅವಳ ಪ್ರೇಮ. ಭವಿತವ್ಯತೆಯು ಬಲವತ್ತರವಾಗಿದೆ. ಮುಂದೇನಾಯಿತು ? ’

‘ ಆಮೇಲೆ ಪುರೂರವನು ಅವಳ ಕಾಲಿಗೆ ಬಿದ್ದು ಬೇಕಾದಷ್ಟು ಬೇಡಿಕೊಂಡನು; ಆದರೂ ಅವಳಿಗೆ ಸಮಾಧಾನವೆನಿಸಲಿಲ್ಲ. ಅವಳು ಕೋಪದ ಆವೇಶದಿಂದಲೋ ಅಥವಾ ಅವಳ ಗುರುವಾದ ಭರತಮುನಿಯ ಶಾಪದಿಂದ ಮೂಢಳಾದಳೋ ಏನೋ—ದೇವತೆಗಳ ನಿಯಮವನ್ನುಲ್ಲಂಘಿಸಿ ಕುಮಾರವನವೆಂಬ ಹೆಸರಿನ ಪ್ರದೇಶದಲ್ಲಿ ಪ್ರವೇಶಿಸಿದಳು. ಆಗ ಅವಳು ಆ ವನಪ್ರದೇಶದಲ್ಲಿ ಕಾಲಿಟ್ಟೊಡನೆಯೇ ಅವಳ ಶರೀರವು ಒಮ್ಮೆಲೆ ಒಂದು ಬಳ್ಳಿಯಾಗಿ ಪರಿಣಮಿಸಿತು. ’

‘ ಒಟ್ಟಿನ ಮೇಲೆ ದೈವಕ್ಕೆ ಅಶಕ್ಯವಾದುದಾವುದೂ ಇರುವದಿಲ್ಲ. ಇಲ್ಲದಿದ್ದರೆ ಇಂಥ ಸ್ತ್ರೀಪುರುಷರಿಗೆ ಇಂಥ ಕೆಟ್ಟ ಪರಿಣಾಮವಾಯಿತೆಂದರೇನು ? ಹುಂ, ಮುಂದೇನಾಯಿತು ? ’

ರಾಜನಿಗೆ ಉರ್ವಶಿಯು ರೂಪಾಂತರ ಹೊಂದಿದುದು ಕಾಣಿಸಲೇ ಇಲ್ಲ. ಅವನು ಅವಳು ಇಲ್ಲಿರಬಹುದು, ಅಲ್ಲಿರಬಹುದು ಎಂದೆನ್ನುತ್ತ ಸುತ್ತೂ ಕಡೆಗೆ ಉರ್ವಶಿಯ ಶೋಧಮಾಡುತ್ತ ಬೇಸತ್ತು ನಿರಾಶನಾದನು. ಅವಳ ಗಾಢತರವಾದ ಸ್ನೇಹಕ್ಕೆ ಎರವಾದೆನಲ್ಲಾ ಎಂಬ ದುಃಖದಿಂದ ತಪ್ತನಾದ್ದರಿಂದ ಅವನಿಗೆ ಉನ್ಮಾದವಾಯಿತು. ಈ ಅವಸ್ಥೆಯಲ್ಲಿ ಅವನು ಉರ್ವಶಿಯ ಶೋಧಮಾಡುತ್ತ ಅಡವಿ ಅರಣ್ಯ ತಿರುಗಾಡತೊಡಗಿದನು. ಹಗಲಿರುಳೂ ಅವನಿಗೆ ವಿಶ್ರಾಂತಿಯೆಂಬುದರ ಅರಿವೇ ಇರಲಿಲ್ಲ. ಯಾಕೆಂದರೆ ಇನ್ನು ಮೇಲೆ ಮಳೆಗಾಲವಾರಂಭವಾಗುವದು. ಸ್ತ್ರೀಪುರುಷರಿಬ್ಬರೂ ಒಂದೇ ಸ್ಥಳದಲ್ಲಿದ್ದರೂ ಯಾರನ್ನು ನೋಡಿ ಅವರು ಹೆಚ್ಚು ಉತ್ಕಂಠಿತರಾಗುವರೋ ಅಂಥ ಮೇಘದರ್ಶನವಾದರೆ ರಾಜನ ಅವಸ್ಥೆಯು ಏನಾಗುವದೋ ಏನೋ ಯಾರಿಗೆ ಗೊತ್ತು ! ಮೊದಲೇ ಉನ್ಮತ್ತನಾದವನು. ಅದರಲ್ಲಿ ಮೇಘದರ್ಶನದಿಂದ ಉತ್ತೇಜಿತನಾದನೆಂದರೆ ಅವನ ಸ್ಥಿತಿಯು ವಿಕೋಪಕ್ಕೆ ಹೋಗುವದು. ಆಗ ಅದಕ್ಕೆ ಉಪಾಯಗಳೇ ಇಲ್ಲದಾಗುವವು ’ ಎಂದು ಸಹಜನ್ಯೆಗೆ ಹೇಳಿ,

ತನ್ನಷ್ಟಕ್ಕೆ ತಾನು ' ಪ್ರಿಯ ಸಖಿಯ ದುಃಖದಿಂದ ಬಳಲಿದ ಪ್ರಿಯ ಹಂಸಿಯು ಕೆಳಗೆ ಉದುರಿ ಬೀಳುತ್ತಿರುವ ಅಶ್ರುಜಲಗಳಿಂದ ತೊಯ್ದು ತಪ್ಪಡಿಯಾಗಿ ಸರೋವರದ ದಂಡೆಯ ಮೇಲೆ ದುಃಖಿತವಾಗಿದೆ ' ಎಂದುಕೊಂಡಳು.

ಇದನ್ನು ಸಹಜನ್ಯೆಯು ಕೇಳಿ ನಿಟ್ಟುಸಿರುಗೊಂಡು ' ಇವರಿಬ್ಬರ ಸಮಾಗಮವು ಪುನಃ ಆಗುವ ಸಂಭವವೇನಾದರೂ ಇದೆಯೇ ? ' ಎಂದು ವಿಚಾರಿಸಿದಳು.

' ಒಂದೇ ಒಂದು ಉಪಾಯವಿದೆ. ಪಾರ್ವತಿಯ ಪಾದರಜದಿಂದ ಉತ್ಪನ್ನವಾದ ಸಂಗಮನೀಯವೆಂಬ ಮಣಿಯು ಸಿಕ್ಕರೆ ಮಾತ್ರ ಅವರ ಸಮಾಗಮವು ಪುನಃ ಆಗುವದು. ಇಲ್ಲದಿದ್ದರೆ ಆಗುವ ಬಗೆಯೆಂತು ? '

' ಇವರೀರ್ವರೂ ಬಲು ಭಾಗ್ಯಶಾಲಿಗಳೆಂದು ನನಗೆನಿಸುತ್ತದೆ. ಇವರಂಥ ಮಾನವರಿಗೆ ಬಹುತರವಾಗಿ ಬಹಳ ದಿನಗಳ ವರೆಗೆ ದುಃಖವನ್ನು ಭೋಗಿಸುವ ಹೊತ್ತು ಬರಲಾರದು. ಆದ್ದರಿಂದ ಅವರ ಸಮಾಗಮವು ಬೇಗನೆ ಆಗುವ ಉಪಾಯವು ದೊರಕುವದೆಂದು ನನಗೆನಿಸುತ್ತಿದೆ. ನಡೆ, ಬಹಳ ಹೊತ್ತಾಯಿತು. ಉದಯಾಚಲದ ಅಧಿಪತಿಯಾದ ಭಗವಾನ್ ಸೂರ್ಯನಾರಾಯಣನ ಉಪಾಸನೆಯನ್ನು ನಾವು ಮಾಡೋಣ. '

ಚಿತ್ರಲೇಖೆಯು ಪುನಃ ತನ್ನಷ್ಟಕ್ಕೆ ತಾನೇ ' ಚಿಂತೆಯಿಂದ ಯಾರ ಮನಸು ದುಃಖಿತವಾಗಿದೆಯೋ, ಮತ್ತು ಯಾರಿಗೆ ತನ್ನ ಸಖಿಯ ಸಮಾಗಮದ ವಿಷಯಕ್ಕೆ ಲಾಲಸೆಯುಂಟಾಗಿದೆಯೋ ಅಂಥ ಹಂಸಿಯು—ಕಮಲಗಳು ಪ್ರಫುಲ್ಲಿತವಾದುದರಿಂದ ಎಷ್ಟು ಮನೋಹರವಾಗಿ ಕಾಣಿಸುತ್ತವೆಯೋ ಅಂಥ ಸರೋವರದಲ್ಲಿ ವಿಹಾರ ಮಾಡುತ್ತಿದೆ' ಎಂದಂದುಕೊಂಡಳು.

ಈ ಪ್ರಕಾರವಾಗಿ ಗೆಳತಿಯ ವಿರಹದಿಂದ ಕಾತರಗೊಂಡ ಚಿತ್ರಲೇಖೆಯನ್ನು ಸಂಗಡ ಕರೆದುಕೊಂಡು ಸಹಜನ್ಯೆಯು ಸೂರ್ಯನನ್ನು ಆರಾಧಿಸಲು ತೆರಳಿದಳು.

ಚಿತ್ರಲೇಖೆಯು ಹೇಳಿದಂತೆ ಇತ್ತ ರಾಜನು ಉನ್ಮತ್ತನಾಗಿ ಅರಣ್ಯದಲ್ಲಿ ಅಲೆದಾಡುತ್ತಿರುವಾಗ ಒಂದು ಆನೆಯು ಕಣ್ಣಿಗೆ ಬಿದ್ದಿತು. ಆಗ ಅವನು ಆನೆಯನ್ನುದ್ದೇಶಿಸಿ ತನ್ನಷ್ಟಕ್ಕೆ ತಾನೇ ' ಪ್ರಿಯೆಯ ವಿರಹದ ಉನ್ಮಾದದಿಂದ

ಯಾರಿಗೆ ಮನೋವಿಕಾರವಾಗಿದೆಯೋ ಅಂಥ ಈ ಗಜೇಂದ್ರನಾಥನು ಅರಣ್ಯ ದಲ್ಲಿರುವ ವೃಕ್ಷಗಳ ಪಲ್ಲವ, ಪುಷ್ಪಗಳಿಂದ ತನ್ನ ಶರೀರವನ್ನು ಭೂಷಿಸಿ ಕೊಂಡು ಈಗ ದಟ್ಟವಾದ ಗಿಡಗಂಟಿಗಳ ಗುಂಪಿನಲ್ಲಿ ಪ್ರವೇಶಿಸುತ್ತದೆ' ಎಂದು ಬಡಬಡಿಸಿದನು.

ಇಷ್ಟರಲ್ಲಿ ಆಕಾಶದಲ್ಲಿ ಮೋಡವು ಕಾಣಿಸಿತು. ಅದನ್ನು ರಾಕ್ಷಸ ವೆಂದು ಭಾವಿಸಿ, ಅವನೇ ಉರ್ವಶಿಯನ್ನು ಎತ್ತಿಕೊಂಡು ಹೋಗಿರಬಹು ದೆಂದು ಬಗೆದು, ಸಿಟ್ಟಿನಿಂದ ಹಲ್ಲುಗಳನ್ನು ಕಡಿಯುತ್ತ 'ಎಲೆ ದುಷ್ಟ ರಕ್ಕಸನೇ ! ನಿಲ್ಲು ನಿಲ್ಲು. ನನ್ನ ಪ್ರಿಯತಮೆಯನ್ನು ತೆಗೆದುಕೊಂಡು ಎಲ್ಲಿಗೆ ಹೊರಟಿರುವೆ ? ' ಎಂದುಕೊಂಡನು. ತಾನು ಕಲ್ಪಿಸಿಕೊಂಡ ರಾಕ್ಷಸನು ತನ್ನ ಮೇಲೆ ಬಾಣವೃಷ್ಟಿಯನ್ನು ಮಾಡುತ್ತಿದ್ದಾನೆಂದು ಗ್ರಹಿಸಿ 'ಈ ದುರಾ ತ್ಮನು ಈ ಪರ್ವತ ಶಿಖರದಿಂದ ಆಕಾಶದಲ್ಲಿ ಹಾರಿಕೊಂಡು ಅಲ್ಲಿಂದ ನನ್ನ ಮೇಲೆ ಬಾಣವೃಷ್ಟಿಯನ್ನು ಮಾಡುತ್ತಿದ್ದಾನೆ. ಏನೂ ಚಿಂತೆಯಿಲ್ಲ. ನೀಚನೇ, ನಾನು ನಿನ್ನನ್ನು ಇಲ್ಲಿಯೇ ಕೊಂದುಹಾಕುವೆನು' ಎಂದೆನ್ನುತ್ತ ಮರದ ಟೊಂಗೆಗಳನ್ನೆತ್ತಿಕೊಂಡು ಹೊಡೆಯಬೇಕೆಂದು ಧಾವಿಸಿದನು.

ಅಷ್ಟರಲ್ಲಿ ಮತ್ತೊಂದು ವಿಚಾರ ಬಂದು 'ಪ್ರಿಯೆಯ ದುಃಖವನ್ನು ಹೃದಯದಲ್ಲಿ ಧರಿಸಿಕೊಂಡಂಥ, ಸರೋವರದಲ್ಲಿ ಪಕ್ಕಗಳನ್ನು ತೊಳೆದು ಕೊಂಡಂಥ, ವ್ಯಾಧನ ಭಯದಿಂದ ವಿಹ್ವಲಗೊಂಡಂಥ ತರುಣ ಹಂಸವು ದುಃಖಕ್ಕೀಡಾಗಿದೆ' ಎಂದನು.

ಮೇಘವನ್ನು ಲಕ್ಷ್ಯಗೊಟ್ಟು ನೋಡಿ, ದೈನ್ಯತೆಯಿಂದ 'ಇದೇನು? ಇವನು ಕೊಬ್ಬಿದ ರಕ್ಕಸನಾಗಿರದೆ ನೂತನ ಮೇಘನಾಗಿ ಮಳೆಗರೆಯುವ ಸಿದ್ಧತೆ ಯಲ್ಲಿರುತ್ತಾನೆ. ಅವನ ಬಳಿಯಲ್ಲಿ ಕಾಣುತ್ತಿರುವದು ಇಂದ್ರಧನುಷ್ಯವಲ್ಲದೆ ಮಳೆಗರೆಯುವ ಬಾಣವಲ್ಲ. ನನ್ನ ಮೈಮೇಲೆ ಬೀಳುತ್ತಿರುವದು ಮಳೆಯ ಹನಿಗಳಲ್ಲದೆ ಬಾಣಗಳ ವರ್ಷಾವವಲ್ಲ. ಕಸೂತಿಯಲ್ಲಿ ತೆಗೆದ ಸುವರ್ಣ ರೇಖೆಯಂತೆ ಹೊಳೆಯುವದು ವಿದ್ಯುಲ್ಲತೆಯಲ್ಲದೆ ಉರ್ವಶಿಯಲ್ಲ' ಎಂದನು.

ಕೆಲಕಾಲ ಕಳೆದಮೇಲೆ ಸಾವಧಾನವಾಗಿ ಮಿಂಚಿನಿಂದ ಹೊಳೆಯುವ ಮೇಘವನ್ನು ನೋಡಿ, ನಿಟ್ಟುಸಿರುಬಿಟ್ಟು 'ನನ್ನ ಪ್ರಿಯಳೂ ಮೃಗನಯ ನೆಯೂ ಆದ ಉರ್ವಶಿಯನ್ನು ಯಾವನೋ ರಾಕ್ಷಸನು ಎತ್ತಿಕೊಂಡು ಹೋಗಿರಬೇಕೆಂದು ನನ್ನ ಭಾವನೆಯಾಗಿತ್ತು. ಆದರೆ ನಿಜವಾಗಿಯೇ ಹಾಗಿರಲೇ

ಪ್ರಫುಲ್ಲಿತವಾದ ಪರ್ವತದ ರಮಣೀಯ ಪ್ರದೇಶದಲ್ಲಿ ಮೆಲ್ಲಮೆಲ್ಲನೆ ಸಂಚಾರ ಮಾಡುತ್ತಿದೆ. '

ಇಷ್ಟು ಮಾತನಾಡಿಕೊಂಡು ಎಲ್ಲ ಕಡೆಗೂ ದೃಷ್ಟಿಯನ್ನು ಬೀರಿ ಒಮ್ಮೆಲೆ ಹರುಷಗೊಂಡು ಅಂದನು : ' ಓಹೋ! ನನ್ನ ಮನಸಿನಲ್ಲಿ ಬಂದಂಥ ಎಲ್ಲ ವಿಚಾರಗಳಿಗೆ ಇವೆಲ್ಲವೂ ಉತ್ತೇಜನಕಾರಿಯಾಗಿವೆ. ಯಾಕೆಂದರೆ ಹೊಸ ಮಳೆಯ ನೀರ ಹನಿಯು ಯಾವುದರ ಮೇಲೆ ಬಿದ್ದಿದೆಯೋ ಅಂಥ ಪುಷ್ಪಗಳ ಪಂಕ್ತಿಯಿಂದ ರಮಣೀಯವಾಗಿ ತೋರುವ ಈ ಶಿಲೀಂಧ್ರವು ಸಿಟ್ಟಿನಿಂದ ಕೆಂಪಾಗಿರುವ ನೀರಿನಿಂದ ತುಂಬಿರುವ ನನ್ನ ಪ್ರಿಯಳ ಕಣ್ಣುಗಳನ್ನು ಹೋಲುತ್ತಿದೆ. '

' ನನ್ನ ಪ್ರಿಯೆಯು ಯಾವ ದಾರಿಯನ್ನು ಹಿಡಿದು ಹೋಗಿರುವ ಳೆಂಬದು ನನಗೆ ಹೇಗೆ ತಿಳಿಯಬೇಕು ? ಮಳೆಯ ನೀರಿನಿಂದ ಭೂಮಿಯ ಮಣ್ಣೆಲ್ಲವೂ ಗಟ್ಟಿಯಾಗಿ ಕುಳಿತಿದೆ. ಇಂಥ ಪ್ರದೇಶದಲ್ಲಿ ಅವಳು ಕಾಲಿನಿಂದ ಪೃಥ್ವಿಯನ್ನು ಸ್ಪರ್ಶಿಸಿ ಹೋಗಿರಬೇಕೆಂದರೆ- ಅವಳ ಉರಸ್ಥಲವು ವಿಶಾಲ ವಾಗಿದ್ದುದರಿಂದ ಅವಳ ಹಿಂಭಾಗವು ನಮ್ರವಾಗಿ ಅದರಿಂದ ಅವಳ ಸುಂದರ ಪಾದಗಳು ಕೀಳಬೇಕಾದರೆ ಮಣ್ಣು ಬಹಳ ಹತ್ತುವದು. ಹಾಗೇನೂ ಇಲ್ಲಿ ಕಾಣುವದಿಲ್ಲವಲ್ಲ ! ' ಮತ್ತೆ ಅತ್ತಿತ್ತ ಅವನ ದೃಷ್ಟಿಯು ಹೋಯಿತು. ಸಮ ಭೂಮಿಯ ಮೇಲೆ ಅದೇ ಹುಟ್ಟುತ್ತಿರುವ ಹುಲ್ಲನ್ನು ಕಂಡು ಆನಂದಿತನಾಗಿ ಅಂದನು : ' ಓಹೋ! ಆ ಸಿಟ್ಟುಬಡಕಿಯಾದ ಸ್ತ್ರೀಯು ತೆರಳಿದ ಮಾರ್ಗವು ಯಾವುದೆಂಬದನ್ನು ಕಂಡುಹಿಡಿಯುವ ಲಕ್ಷಣಗಳು ನನಗೆ ಕಾಣಹತ್ತಿವೆ. ಯಾವಳು ತನ್ನ ತುಟಿಯ ಬಣ್ಣವನ್ನು ಅಳಕಿಸಿಕೊಂಡು, ಹೊಕ್ಕಳದ ವರೆಗೆ ಸುರಿದು ಬಂದ ಕಂಬನಿಯಿಂದ ಗಿಳಿಯ ಹೊಟ್ಟೆಯಂತೆ ಸುಂದರವಾಗಿ ಕಾಣುವ ಅವಳ ಎದೆಯ ಮೇಲಿನ ಹಸಿರು ವಸ್ತ್ರವೇ ಇಲ್ಲಿ ಬಿದ್ದಿರುವದರಲ್ಲಿ ಸಂಶಯವೇ ಇಲ್ಲ. ನಾನು ಅದನ್ನು ತೆಗೆದುಕೊಳ್ಳುತ್ತೇನೆ. ಅದರಿಂದ ಅವಳು ಹೊರಟು ಹೋಗಿರುವ ದಾರಿಯು ತಾನೇ ತಿಳಿಯುವದು ' ಎನ್ನುತ್ತ ಕೈಯಿಂದ ಅದನ್ನು ತೆಗೆದುಕೊಳ್ಳುವ ಎತ್ತುಗಡೆ ಮಾಡಿದನು. ವಸ್ತ್ರವೆಲ್ಲಿಂದ ಬರಬೇಕು ಅಲ್ಲಿ ! ಅಲ್ಲಿ ಹಸಿರು ಮುರಿಯುವ ಹುಲ್ಲುಹಾಸಿಗೆಯಿತ್ತು. ಅವನ ಕೈಗೆ ಹಸಿರಾದ ಹುಲ್ಲುಕಡ್ಡಿಯು ಬಂದಾಗ ' ಇದೇನು ? ಇಂದ್ರಗೋಪ

ವೆಂಬ ಹುಳದಿಂದ ಸುಶೋಭಿತವಾಗಿರುವ ಈ ಹುಲ್ಲು! ಈ ಅರಣ್ಯದಲ್ಲಿ ನನ್ನ ಪ್ರಿಯೆಯ ಸುದ್ದಿಯು ನನಗೆ ಹೇಗೆ ತಿಳಿದೀತು ?'

ಮಳೆಯು ಬೀಳುತ್ತಲಿದ್ದುದರಿಂದ ನೀರು ಹರಿಯುತ್ತಿತ್ತು. ಅದರ ಬದಿಯಲ್ಲಿಯ ಬಂಡೆಗಲ್ಲೊಂದರ ಮೇಲೆ ಕುಳಿತು ಧ್ವನಿಗೈಯುತ್ತಿರುವ ನವಿಲನ್ನು ಕಂಡು 'ಜೋರಿನಿಂದ ಬೀಸುವ ಗಾಳಿಗೆ ತುರಾಯಿಯು ಹಾರಾಡುತ್ತಿರುವಂಥ ನವಿಲು ದೀರ್ಘ ಸ್ವರದೆಗೆದು ಗರ್ಜಿಸುತ್ತಿದೆ' ಎಂದನು. ಆ ನವಿಲೇನಾದರೂ ಉರ್ವಶಿಯ ಸುದ್ದಿಯನ್ನು ತಿಳಿಸಬಹುದೆಂದು ಬಗೆದು ಅದರ ಹತ್ತಿರಕ್ಕೆ ಹೋಗಿ, ಇದನ್ನು ಪ್ರಶ್ನಿಸಬೇಕೆಂದು ಮಾಡಿದಾಗ ಅವನ ವಿಚಾರಲಹರಿಯು ಬದಲಾಗಿ 'ಪ್ರತಿಪಕ್ಷಿಯಾದ ಆನೆಯ ಸಮಾಚಾರವನ್ನು ತೆಗೆದುಕೊಳ್ಳಬಯಸುವ, ಪ್ರಿಯತಮೆಯ ದರ್ಶನಕ್ಕಾಗಿ ಹಂಬಲಿಸುವ ಗಜರಾಜನ ಮಾನವು ವಿಸ್ಮೃತವಾಗಿದೆ' ಎಂದುಕೊಂಡು ಮತ್ತೆ ನವಿಲ ಕಡೆಗೆ ಹೊರಳಿ 'ಮಯೂರವೇ, ನೀನು ನನಗೆ ಪರಕೀಯನಲ್ಲೆಂದು ನಿನಗೆ ಬೇಡಿಕೊಳ್ಳುತ್ತೇನೆ. ಈ ಅರಣ್ಯದಲ್ಲಿ ನೀನು ಸಂಚರಿಸುವಾಗ ನನ್ನ ಪ್ರಿಯೆಯು ನಿನ್ನ ಕಣ್ಣಿಗೆ ಬಿದ್ದರೆ ನನಗೆ ಹೇಳು. ಅವಳ ಲಕ್ಷಣಗಳನ್ನು ಹೇಳುತ್ತೇನೆ, ಕೇಳು. ಅವಳ ಮುಖವು ಚಂದ್ರನಂತಿದೆ. ಅವಳ ಗತಿಯು ಹಂಸದಂತಿದೆ. ಈ ಲಕ್ಷಣಗಳ ಮೇಲಿಂದ ನಿನಗೆ ಅವಳ ಗುರುತು ಸಹಜವಾಗಿ ಹತ್ತುವದು.'

ಮಯೂರವು ಉತ್ತರ ಕೊಡಲಿಲ್ಲೆಂದು ಅದಕ್ಕೆ ಕೈಮುಗಿದು 'ನೀಲಕಂಠನೇ, ನೀನು ಈ ಅರಣ್ಯದಲ್ಲಿ ಸಂಚರಿಸುವಾಗ ಚಂಚಲ ಕಟಾಕ್ಷವುಳ್ಳ ನನ್ನ ಪ್ರಿಯೆಯನ್ನು ನೋಡಿಲ್ಲವೇ ? ನಿಜವಾಗಿಯೂ ಅವಳು ನೋಡತಕ್ಕವಳಾಗಿದ್ದಾಳೆ.' ನವಿಲು ಕುಣಿಯುತ್ತಿತ್ತು. ಅದನ್ನು ಕಂಡು 'ಇದು ನನ್ನ ಪ್ರಶ್ನೆಗೆ ಉತ್ತರವೀಯದೆ ಚಕ್ಕಂದದಿಂದ ಕುಣಿಯುತ್ತಿದೆಯಲ್ಲ! ಇದಕ್ಕೆ ಇಷ್ಟು ಆನಂದವಾಗಲೇನು ಕಾರಣವಿದೆ ?' ಸ್ವಲ್ಪ ಹೊತ್ತು ವಿಚಾರ ಮಾಡಿ 'ಹಾಂ! ತಿಳಿಯಿತು. ಅದಕ್ಕಾಗಿಯೇ ಕುಣಿಯುತ್ತಿದೆ. ನನ್ನ ಪ್ರಿಯೆಯು ನಾಶವಾಗಿರಬೇಕೆಂದೇ ಗಾಳಿಯಿಂದ ಮೆಲ್ಲನೆ ಹಾರಾಡುತ್ತಿರುವ ಇದರ ಕಲಾಪವು ಈಗ ನಿರ್ವೈರವಾಗಿದೆ. ರತಿಸಮಯದಲ್ಲಿ ಬಿಚ್ಚುಮುಡಿಯುಳ್ಳವಳಾದ ನನ್ನ ಪ್ರಿಯೆಯು ನಯವಾದ ಕೂದಲುಗಳುಳ್ಳವಳು. ಕೈಯಲ್ಲಿ ಹೂವಿನ ಗುಚ್ಛವನ್ನು ಹಿಡಿದುಕೊಂಡು ನಿಂತರೆ ಪಾಪ! ಈ ಬಡ ನವಿಲಿಗೆ ತನ್ನ

ಪಾಲನ್ನು ಮೆರೆಸಲು ಸ್ಥಾನವಾದರೂ ಎಲ್ಲಿದೆ ? ಅದೇನೇ ಇರಲಿ. ಈ ನವಿಲು ಮಾತ್ರ ಎರಡನೆಯವರ ದುಃಖವನ್ನು ಕಂಡು ದುಃಖಿಯಾಗದೆ ಸುಖವಾಗಿಯೇ ಇದೆ. ಆವಕಾರಣ ನಾನು ಇಂಥ ದುಷ್ಟವಾದ ನವಿಲನ್ನು ನನ್ನ ಪ್ರಿಯೆಯ ಸಮಾಚಾರವಾಗಿ ವಿಚಾರಿಸುವದೇ ಇಲ್ಲ. '

ಹೀಗೆ ಸುತ್ತಾಡಿ ಸ್ವಲ್ಪ ಮುಂದೆ ಬಂದ ಬಳಿಕ ಕೋಕಿಲವೊಂದು ಕಣ್ಣಿಗೆ ಬಿದ್ದಿತು. ಅದನ್ನು ಕಂಡು ' ಎಷ್ಟು ಚೆನ್ನಾಗಿದೆ ! ಮದವಳಿದ ಈ ಕೋಕಿಲವು ನೀರಲಗಿಡದ ಮೇಲೆ ಕುಳಿತಿದೆ. ಪಕ್ಷಿಸಮೂಹದಲ್ಲಿಯೇ ಇದು ಬಲು ಚತುರ ಪ್ರಾಣಿಯಾಗಿದೆ. ಇದನ್ನೂ ವಿಚಾರಿಸೋಣ ' ಎನ್ನುತ್ತಿರು ವಾಗಲೆ ಆನೆಯ ಕಡೆಗೆ ಅವನ ಲಕ್ಷ್ಯವು ಹೋಗಿ ತನ್ನಷ್ಟಕ್ಕೆ ತಾನೇ ' ವಿದ್ಯಾಧರನ ತೋಟದಲ್ಲಿ ಮಗ್ನವಾದಂಥ, ದುಃಖದಿಂದ ಅಶ್ರುಜಲಪೂರಿತ ನೇತ್ರಗಳುಳ್ಳಂಥ, ಹೃದಯಾಂತರಾಳದಿಂದ ಆನಂದವನ್ನು ತ್ಯಜಿಸಿದಂಥ ಈ ಗಜೇಂದ್ರನು ಸುತ್ತೂ ಕಡೆಗೆ ತಿರುಗುತ್ತಾನೆ ' ಎಂದು, ಮತ್ತೆ ಕೋಕಿಲದ ಕಡೆಗೆ ಹೊರಳಿ ' ಕೋಕಿಲವೇ, ನೀನು ಸವಿ ಮಾತನಾಡುವವನೂ ಸುಂದರನೂ ಆಗಿರುವಿ. ಸ್ವರ್ಗದ ನಂದನವನದಲ್ಲಿಯೂ ಮನಬಂದಂತೆ ಸಂಚರಿಸುವಿ. ಆದರೆ ಪರಪುಷ್ಟವೇ, ನನ್ನ ಪ್ರಿಯತಮೆಯು ನಿನ್ನ ಕಣ್ಣಿಗೆ ಎಲ್ಲಿಯಾದರೂ ಬಿದ್ದಿದ್ದರೆ ಹೇಳು ' ಎಂದು ಅದರ ಮುಂದೆ ರಾಜನು ಬಹಳ ಹೊತ್ತು ಕುಣಿ ದಾಡಿದನು. ಆಮೇಲೆ ಮೊಣಕಾಲೂರಿ ಕುಳಿತು ಅಂದನು : ' ಕಾಮುಕರು ನಿನಗೆ ಮದನನ ದೂತಿಯೆಂದೆನ್ನುವರು. ಸಿಟ್ಟಿಗೆದ್ದ ಸ್ತ್ರೀಯರ ಮಾನಭಂಗ ವನ್ನು ಮಾಡಿ ಗಂಡಂದಿರಿಗೆ ಶರಣು ಬರುವಂತೆ ಮಾಡುವದರಲ್ಲಿ ನೀನು ಅಮೋಘ ಅಸ್ತ್ರವಾಗಿರುವೆ. ಹಾಗಿದ್ದರೆ ನನ್ನವಳನ್ನು ನನ್ನ ಹತ್ತಿರ ತಂದು ಕೊಡು, ನೋಡೋಣ. ಇಲ್ಲದಿದ್ದರೆ ಅವಳ ಹತ್ತಿರ ನನ್ನನ್ನಾದರೂ ಎಳೆದು ಕೊಂಡು ಹೋಗು. '

ಕೋಕಿಲವು ಏನೋ ಶಬ್ದ ಮಾಡಿತು. ಅದನ್ನು ಕೇಳಿ ಪುನಃ ಅಂದನು. ' ಏನೆನ್ನುವಿ ? ನೀನು ಇಷ್ಟು ಅನುರಕ್ತನಾಗಿದ್ದರೂ ನಿನ್ನವಳು ನಿನ್ನನ್ನು ಹೇಗೆ ಬಿಟ್ಟು ಹೋದಳು ಎಂದೆನ್ನುವಿಯಾ ? ಹಾಗಾದರೆ ಕೇಳು: ಅವಳು ಸಿಟ್ಟಿ ಗೆದ್ದಿರಬೇಕೆಂದರೆ—ಒಮ್ಮೆಯಾದರೂ ನನ್ನಿಂದ ಅಂಥ ಅಪರಾಧವಾದುದರ ಸಂದರ್ಭವೇ ಇಲ್ಲ. ಗಂಡಂದಿರ ಮೇಲೆ ಹೆಂಡಂದಿರ ಸರ್ವಾಧಿಕಾರವೇ

ಇರುತ್ತದೆ. ಉತ್ಕಟ ಪ್ರೀತಿಯಿದ್ದರೆ ಅಲ್ಲಿ ಸಿಟ್ಟಿಗೇಳಲು ಏನಾದರೂ ಅಪ ರಾಧವಾಗಲೇಬೇಕೆಂಬ ನಿಯಮವೇನೂ ಇಲ್ಲ.' ಅಷ್ಟರಲ್ಲಿ ಗಡಿಬಿಡಿಯಿಂದ ಕೆಳಗೆ ಕುಳಿತನು. ಮತ್ತೆ ಮೊಣಕಾಲ ಮುಂಡೆಯೂರಿ ಎದ್ದನು. ಕೋಕಿಲವು ತನ್ನ ಕಡೆಗೆ ದುರ್ಲಕ್ಷಿಸಿದೆ ಎಂದು ಬಗೆದು 'ಈ ಸುಡುಗಾಡು ಕೋಕಿಲವು ನಾನು ಹೇಳುತ್ತಿರುವದರ ಕಡೆಗೆ ಕಿವಿಗೊಡದೆ ತನ್ನ ಕೆಲಸದಲ್ಲಿಯೇ ಗುಂಗಾ ಗಿದೆ. ಆದರೆ ಈ ಬಗ್ಗೆ ಅದಕ್ಕೇಕೆ ದೋಷವನ್ನು ಕೊಡಬೇಕು ? ಸಾಮಾನ್ಯ ವಾಗಿ ಪರರ ದುಃಖವು ಎಷ್ಟೇ ಇದ್ದರೂ ಅದು ಶೀತಲವಾಗಿಯೇ ಭಾಸವಾಗು ತ್ತದೆಂದು ಜನರು ಅನ್ನುವದೇನು ಸುಳ್ಳಲ್ಲ. ಮದಾಂಧವಾದ ಈ ಕೋಕಿಲವು ನನ್ನ ಪ್ರಾರ್ಥನೆಯನ್ನು ಗಣಿಸದೆ ನಾನಿಷ್ಟು ದು:ಖದಲ್ಲಿ ಬಿದ್ದಿದ್ದರೂ ನನ್ನನ್ನು ಕಡೆಗಣಿಸಿ ನೀರಲ ಗಿಡದ ಈ ಟೊಂಗೆಯಲ್ಲಿ ಕುಳಿತು ನಾನು ನನ್ನ ಪ್ರಿಯೆಯ ಅಧರಾಮೃತಪಾನವನ್ನು ಮಾಡುವಂತೆ—ಕಳಿತ ಹಣ್ಣುಗಳ ಸೇವನವನ್ನು ಮಾಡುವದರಲ್ಲಿ ಪ್ರವೃತ್ತವಾಗಿದೆ. ನನ್ನೊಡನೆ ಅದು ಹೀಗೆ ವರ್ತಿಸಿದ್ದರೂ ಕೂಡ ಅದರ ಕಂಠವು ಬಲು ಮಧುರವಾಗಿದೆ. ಅದರಿಂದ ನನ್ನ ಪ್ರಿಯ ತಮೆಯ ಕಂಠವೇ ಇದಾಗಿರಬೇಕೆಂದೆನಿಸುತ್ತದೆ. ಆದ್ದರಿಂದ ನಾನಿದರ ಮೇಲೆ ಸಿಟ್ಟಾಗಲಾರೆನು. ಕುಶಲವಾಗಿರು. ನಾನು ನನ್ನ ಕೆಲಸಕ್ಕಾಗಿ ಹೊರಡುತ್ತೇನೆ' ಎಂದಂದು ಅಲ್ಲಿಂದೆದ್ದನು.

ಅಷ್ಟರಲ್ಲಿ ಆ ಅರಣ್ಯದ ದಕ್ಷಿಣದಿಕ್ಕಿನಲ್ಲಿ ಏನೋ ಶಬ್ದವಾಯಿತು. ಅದನ್ನು ಕೇಳಿ ರಾಜನೆಂದನು: 'ಈ ದಕ್ಷಿಣ ದಿಕ್ಕಿನಿಂದ ಬರುವ ಶಬ್ದವು ನನ್ನ ಪ್ರಿಯೆಯ ಕಾಲಂದುಗೆಗಳ ಶಬ್ದದಂತೆಯೇ ಕೇಳಬರುತ್ತಿದೆ. ಆದ್ದರಿಂದ ಆ ಶಬ್ದ ಬಂದ ಕಡೆಗೆ ಹೋಗಿ ಆಕೆಯನ್ನು ಹಿಡಿಯುವೆನು' ಎಂದು ಆ ದಿಕ್ಕಿನ ಕಡೆಗೆ ಸಾಗಿದನು.

ಪುನಃ ಅಷ್ಟರಲ್ಲಿ ತನ್ನಷ್ಟಕ್ಕೆ ತಾನೇ ಅಂದುಕೊಂಡನು: 'ಪ್ರಿಯತಮೆಯ ವಿರಹದಿಂದ ಬಾಡಿದ ಮೊಗದವನಾಗಿ, ಒಂದೇಸವನೆ ಕಣ್ಣೀರು ಹಾಕುವವ ನಾಗಿ, ದುಃಖದ ಯೋಗದಿಂದ ಅಸ್ತಾವ್ಯಸ್ತವಾದ ನಡಿಗೆಯುಳ್ಳವನಾಗಿ, ಕ್ಷಣ ಕ್ಷಣಕ್ಕೆ ವೃದ್ಧಿಂಗತವಾಗುತ್ತಿರುವ ಸಂತಾಪದಿಂದ ದೇಹವು ಸುಟ್ಟಂತಾಗಿ, ಮನಸ್ಸು ವ್ಯಾಕುಲಗೊಂಡಂತಾಗಿ ಗುಹೆಯನ್ನು ಹೊಗುವ ಗಜೇಂದ್ರನಂತೆ ನಾನು ಈ ಅರಣ್ಯದಲ್ಲಿ ಪರಿಭ್ರಮಣ ಮಾಡುತ್ತಿದ್ದೇನೆ.' ಹೀಗೆ ಅಂದು

ಕೊಳ್ಳುತ್ತ ಸಾಕಷ್ಟು ದೂರ ಬಂದು ದುಃಖಾವೇಶವು ತಡೆಯದಂತಾಗಿ 'ನಾನು ಭ್ರಮಿಷ್ಟನಾಗಿದ್ದೇನೆ. ಮೇಘಮಂಡಲದಿಂದ ಆಕಾಶವು ಕಪ್ಪಗವಿದುದನ್ನು ಕಂಡು ಅದು ಮಾನಸ ಸರೋವರಕ್ಕೆ ಹೋಗಲು ಉತ್ಸುಕವಾಗಿರುವ ರಾಜ ಹಂಸದ ಶಬ್ದವಾಗಿರಬೇಕು. ನನ್ನ ಪ್ರಿಯೆಯ ಕಾಲಂದುಗೆಯ ಶಬ್ದವಲ್ಲ' ಎಂದುಕೊಂಡನು.

ಮಾನಸ ಸರೋವರಕ್ಕೆ ಹಾರಿಹೋಗಲು ಉತ್ಸುಕವಾಗಿರುವ ಈ ಹಂಸವು ಈ ಸರೋವರದಿಂದ ಪಾರಾಗಿ ಹೋಗುವವರೆಗೆ ನನ್ನ ಪ್ರಿಯೆಯ ಸುದ್ದಿಯನ್ನು ಇದಕ್ಕೆ ತಿಳಿಸುವೆನೆಂದು ವಿಚಾರಮಾಡಿ 'ಪಕ್ಷಿರಾಜನೇ, ನೀನು ಮಾನಸಸರೋವರಕ್ಕೆ ಹೋಗುವವನೇ ಇರುವಿ; ಹೋಗುವಿಯಂತೆ. ನೀನು ದಾರಿಯಲ್ಲಿ ತಿನ್ನಬೇಕೆಂದು ನಿನ್ನ ಚುಂಚುವಿನಲ್ಲಿ ಕಚ್ಚಿಕೊಂಡಿರುವ ಕಮಲದ ದೇಟನ್ನು ಒಗೆದುಬಿಡು. ಹಿಂದುಗಡೆ ತೆಗೆದುಕೊಳ್ಳಲು ಬರುವದು. ಮೊದಲು ನನ್ನ ಪ್ರಿಯೆಯ ವರ್ತಮಾನವನ್ನು ಹೇಳಿ ನನ್ನನ್ನು ಈ ಶೋಕ ಸಮುದ್ರ ದಿಂದ ಮೇಲೆತ್ತು. ತಮ್ಮ ಕೆಲಸಬೊಗಸೆಗಳನ್ನು ಬಿಟ್ಟುಕೊಟ್ಟು ಎರಡನೆ ಯವರ ಕೆಲಸವನ್ನು ಮಾಡುವವರು ಯಾರು? ನಿಜವಾಗಿ ಸತ್ಪುರು ಷರಿಗೆ ಸ್ವಾರ್ಥಕ್ಕಿಂತಲೂ ಶರಣಾಗತರ ಕೆಲಸವನ್ನು ಮಾಡುವದೇ ದೊಡ್ಡ ದೆಂದೆನಿಸುತ್ತಿರುತ್ತದೆ. ಮಾನಸಸರೋವರಕ್ಕೆ ಹಾರುವ ಗಡಿಬಿಡಿಯಲ್ಲಿ ನೀನು ನನ್ನ ಪ್ರಿಯೆಯನ್ನು ಎಲ್ಲಿಯೂ ನೋಡಲಿಲ್ಲೆಂದೆನ್ನುವಿಯಾ? ಈ ಮಾತನ್ನೇಕೆ ಬಚ್ಚಿಟ್ಟುಕೊಂಡಿರುವಿ? ಈ ನಿನ್ನ ನಡಗೆಯ ರೀತಿಯನ್ನು ನೋಡಿದರೆ ನೀನು ನನ್ನ ಪ್ರಿಯೆಯನ್ನು ನೋಡಿರಬೇಕೆಂದು ನಾನು ಭಾವಿಸುತ್ತೇನೆ. ಸ್ತನಗಳ ಭಾರದಿಂದ ಮಂದಮಂದವಾಗಿ ನಡೆಯುವ ಆ ನನ್ನ ಪ್ರಿಯಕರಳನ್ನು ಬಿಟ್ಟು ಇನ್ನಾರ ಹತ್ತಿರ ನೀನು ಈ ಗತಿಯನ್ನು ಕಲಿತುಕೊಂಡಿರುವಿ? ಆ ಸರೋ ವರದ ದಂಡೆಯ ಮೇಲೆ ನನ್ನ ಪ್ರಿಯೆಯು ನಿನ್ನ ದೃಷ್ಟಿಗೆ ಬೀಳದಿದ್ದರೆ, ಮದ ದಿಂದ ಉಬ್ಬಿ ನಡೆಯುವ ಹೊಲಬನ್ನು ಆಡುತ್ತಾಡುತ್ತ ನೀನು ಯಾರಕಡೆ ಯಿಂದ ಕಲಿತಿರುವಿ?' ಎಂದನು.

ರಾಜನು ಈ ಪಕ್ಷಿಯ ಸಮೀಪಕ್ಕೆ ಹೋಗಿ ಕೈಯನ್ನು ಮುಗಿದು 'ಹಂಸವೇ, ನೀನು ನನ್ನ ಆರಾಧ್ಯ ದೇವತೆಯನ್ನು ಒಯ್ದಿರುವಿ. ಸುಮ್ಮನೆ ಕೊಟ್ಟುಬಿಡು. ಕಳೆದುಹೋದ ವಸ್ತುಗಳಲ್ಲಿ ಕೆಲವು ವಸ್ತುಗಳಾದರೂ

ಯಾರಲ್ಲಾದರೂ ದೊರೆತರೆ ಅವರಿಗೇ ಆ ಎಲ್ಲ ವಸ್ತುಗಳ ಸಂಬಂಧ ಹತ್ತುವದು ನ್ಯಾಯವೇ ಆಗಿದೆ. ಆ ನನ್ನ ಮನೋಹಾರಿಣಿಯ ಸರ್ವ ಗುಣಗಳೂ ನಿನ್ನಲ್ಲಿ ಇದ್ದಂತೆ ಕಾಣಿಸುವದಿಲ್ಲ. ಆದರೂ ಅವಳ ನಡೆಯುವ ರೀತಿಯನ್ನು ನೀನು ಕದ್ದಿರುವಿ. ಇಷ್ಟರಿಂದಲೇ ನೀನು ಆಕೆಯನ್ನು ತಂದುಕೊಡಲೇ ಬೇಕು; ಇಲ್ಲವೆ ಅವಳನ್ನು ತೋರಿಸಲೇ ಬೇಕು ' ಎಂದೆನ್ನುವಷ್ಟರಲ್ಲಿ ಆ ಹಂಸ ಪಕ್ಷಿಯು ಅಲ್ಲಿಂದ ಹಾರಿ ಹೋದುದನ್ನು ಕಂಡು ತನ್ನ ಮನಸಿನಲ್ಲಿಯೇ ನಗುತ್ತ ' ಕಳ್ಳರಿಗೆ ಶಿಕ್ಷೆಯನ್ನು ವಿಧಿಸಬಲ್ಲ ರಾಜನೇ ನಾನೆಂದು ತಿಳಿದು ಆ ಗುಲಾಮನು ಬೆದರಿ ಇಲ್ಲಿಂದ ಓಡಿಹೋದನು. ಏನೂ ಚಿಂತೆಯಿಲ್ಲ. ಎರಡನೆಯ ಕಡೆಯಲ್ಲಿ ಹುಡುಕಿ ಅದನ್ನು ಹಿಡಿದು ತರುವೆನು. ನನ್ನ ಪ್ರಿಯೆಯನ್ನು ಅಪಹರಿಸಿದ ಈ ಕಳ್ಳನು ಹೋಗುವದಾದರೂ ಎಲ್ಲಿಗೆ ? ' ಎಂದೆನ್ನುವಷ್ಟರಲ್ಲಿ ಒಂದೆಡೆಯಲ್ಲಿ ಕುಳಿತ ಚಕ್ರವಾಕ ಯುಗಲವೊಂದು ಅವನ ಕಣ್ಣಿಗೆ ಬಿದ್ದಿತು. ಆಗ ರಾಜನ ತಲೆಯಿಂದ ಹಂಸದ ವಿಚಾರವು ಹೋಗಿ ' ಹೋದರೆ ಹೋಗಲಿ ಆ ಕಳ್ಳನು. ಈಗ ಪ್ರಿಯಕರಳಿಂದ ಕೂಡಿದ ಚಕ್ರವಾಕ ಪಕ್ಷಿಯು ಇಲ್ಲಿ ಕುಳಿತಿದೆ. ಇದನ್ನೇ ಕೇಳಿ ತಿಳಿದುಕೊಂಡರಾಯಿತೆಂದು ಮನಸಿನಲ್ಲಿ ' ಗಿಡಗಳ ಮರ್ಮರ ಶಬ್ದದಿಂದ ಮನೋಹರವಾಗಿ ಕಾಣುವ, ಪ್ರಫುಲ್ಲಿತ ಹೂಗಳಿಂದ ತುಂಬಿರುವ ಗಿಡಗಳಿಂದ ಶೋಭಿಸುವ ಈ ಅರಣ್ಯದಲ್ಲಿ ವಿರಹದಿಂದ ಕಾತರಗೊಂಡ ಗಜೇಂದ್ರನು ಪರಿಭ್ರಮಿಸುತ್ತಿದ್ದಾನೆ ' ಎಂದು ಅಂದುಕೊಂಡನು.

' ಚಕ್ರವಾಕಪಕ್ಷಿಯೇ, ನೀನು ಗೋರೋಚನದಂತಿದ್ದು, ನಿನ್ನ ಪ್ರಿಯೆಯು ಕೇಶರದಂತಿರುವಳು. ಈ ವಸಂತ ಋತುವಿನಲ್ಲಿ ವಿವಿಧ ಕ್ರೀಡೆಗಳನ್ನಾಡುವ ಧನ್ಯಳಾದ ನನ್ನ ಪ್ರಿಯೆಯನ್ನು ನೋಡಿರುವಿಯಾ ? '

ಅಷ್ಟರಲ್ಲಿ ಆ ಚಕ್ರವಾಕವು ತನ್ನ ಹುಟ್ಟು—ಸ್ವಭಾವಕ್ಕನುಸರಿಸಿ ಕಃಕಃ ಎಂದು ಶಬ್ದ ಮಾಡಿತು. ಅದರಿಂದ ' ನೀನಾರು ? ' ಎಂದು ತನಗೆ ಅದು ಪ್ರಶ್ನಿಸುತ್ತಿದೆ ಎಂದು ಭಾವಿಸಿ ರಾಜನು ' ನೀನು ನನ್ನನ್ನು ಯಾರು ಎಂದು ಕೇಳುವಿಯಾ ? ನಾನಾರೆಂಬದು ನಿನಗೆ ಗೊತ್ತಿಲ್ಲವೇ ? ಯಾರಿಗೆ ಸೂರ್ಯ ಚಂದ್ರರು ಮಾತಾಮಹ ಪಿತಾಮಹರಾಗುವರೋ, ಯಾರಿಗೆ ಉರ್ವಶಿಯೂ, ಸಮಸ್ತ ಭೂಮಂಡಲವೂ ತಾನಾಗಿಯೇ ವರಿಸಿರುವರೋ ಅಂಥವನಾದ ನಾನು—ಪುರೂರವ ರಾಜನು ! '

ಪಾಪ ! ಆ ಬಡ ಪಕ್ಷಿಗೆ ರಾಜನ ಮಾತಿನ ಅರ್ಥವೇನಾಗಬೇಕು ? ಅದು ಪುನಃ ಯಾವ ಶಬ್ದವನ್ನೂ ಮಾಡದಿರುವದನ್ನು ನೋಡಿ ರಾಜನು ' ಇದು ಶುಂಭನಂತೆ ಕುಳಿತಿರುವದು. ನಾನಿದರ ಯೋಗಕ್ಷೇಮವನ್ನು ಚೆನ್ನಾಗಿ ತೆಗೆದುಕೊಳ್ಳುವೆನು ' ಎಂದಂದು ಮೊಣಕಾಲೂರಿ ' ಸಭ್ಯ ಗೃಹಸ್ಥನೇ, ತಮ್ಮಂತೆ ಎರಡನೆಯವರಿಗೂ ದುಃಖಗಳಿರುತ್ತವೆಂದು ತಿಳಿದು ನಡೆಯುವದು ಒಳ್ಳೇದು. ಸರೋವರದಲ್ಲಿ ಒತ್ತಟ್ಟಿಗಿದ್ದರೂ ಕಮಲಪತ್ರವಷ್ಟೇ ಮರೆಯಾದ್ದರಿಂದ ನನ್ನ ಪ್ರಿಯೆಯು ಎಲ್ಲಿಯೋ ದೂರಿರುವಳೆಂದು ಬಗೆದು ಉತ್ಕಂಠಿತನಾಗಿ ರಾತ್ರಿಯೆಲ್ಲ ಚೀರಾಡುತ್ತಿರುವಿಯಲ್ಲ ! ಹೀಗೆ ಸ್ತ್ರೀಯ ವಿಶೇಷ ಸ್ನೇಹದಿಂದ ಅವಳ ವಿರಹಕ್ಕಾಗಿ ಚಡಪಡಿಸುತ್ತಿರುವ ನೀನು ಸದ್ಯಕ್ಕೆ ನನಗೆ ಪ್ರಿಯೆಯ ವಿರಹವಾಗಿದ್ದರೂ ನನ್ನ ವಿಷಯಕ್ಕೆ ಉದಾಸೀನವಾಗಿರುವದೆಂದರೇನು ? '

ರಾಜನು ಈ ಪ್ರಕಾರವಾಗಿ ಚಕ್ರವಾಕ ಪಕ್ಷಿಗೆ ಪ್ರಾರ್ಥಿಸಿಕೊಂಡರೂ ಅದೇನು ತುಟಿ ಎರಡು ಮಾಡಲಿಲ್ಲ. ಆಗ ರಾಜನು ಕೈಯಿಂದ ಗಲ್ಲವನ್ನು ಹಿಡಿದುಕೊಂಡು ' ನನ್ನ ದೈವವೇ ತಿರುಗಿದೆ. ಅದರ ಪ್ರಭಾವದಿಂದಲೇ ಹೀಗಾಗಿದೆ. ಇಲ್ಲದಿದ್ದರೆ ಈ ಪಕ್ಷಿಯು ನನ್ನ ಬಗ್ಗೆ ಇಷ್ಟೊಂದು ಉದಾಸೀನತೆಯನ್ನು ಯಾಕೆ ತೋರಿಸುತ್ತಿತ್ತು ? ಆಯಿತು ಇನ್ನು ಮತ್ತೊಂದೆಡೆಯಲ್ಲಿ ಹುಡುಕಿ ನೋಡುವಾ ' ಎಂದನು.

' ಯಾವುದರಲ್ಲಿ ಭ್ರಮರವು ಸಿಕ್ಕಿಕೊಂಡು ಗುಂಜಾರವವನ್ನು ಮಾಡುತ್ತದೆಯೋ ಅಂಥ ಕಮಲವು ನನ್ನನ್ನು ತನ್ನೆಡೆಗೆ ಬಾ ಎಂದು ಕರೆಯುತ್ತಿದೆ. ಯಾಕೆಂದರೆ ಕೆಳದುಟಿಯ ಚುಂಬನವನ್ನು ನಾನು ತೆಗೆದುಕೊಂಡುದರಿಂದ ಸೀತ್ಕಾರವು ಹೊರಡುವಂಥ ನನ್ನ ಪ್ರಿಯೆಯ ಮುಖವು ಈ ಕಮಲದಂತಿದೆ. ಇಲ್ಲಿಂದ ನಾನು ಬೇರೆ ಕಡೆಗೆ ಹೋದರೆ ಪಶ್ಚಾತ್ತಾಪವಾಗಬಹುದೆಂದು ಹಾಗೆ ಮಾಡದೆ ಕಮಲವನ್ನು ಸೇವಿಸುವ ಈ ಭ್ರಮರನೊಡನೆ ಸ್ನೇಹವನ್ನು ಸಂಪಾದಿಸಿ, ಅದಕ್ಕೆ ಬೇಡಿಕೊಳ್ಳುತ್ತೇನೆ. '

ಅಷ್ಟರಲ್ಲಿ ತನ್ನಷ್ಟಕ್ಕೆ ತಾನೇ ' ಇಬ್ಬರದೂ ಒಂದೇ ಪ್ರವೃತ್ತಿ ಇದ್ದುದರಿಂದ ಪ್ರೇಮರಸದಿಂದ ಉಕ್ಕುತ್ತಿರುವ ತರುಣ ಹಂಸವು ಸರೋವರದೊಳಗೆ ಕಾಮರಸದಲ್ಲಿ ಈಸಾಡುತ್ತಿದೆ ' ಎಂದನು.

ಭ್ರಮರದ ಹತ್ತಿರ ಹೋಗಿ ಅದಕ್ಕೆ ಕೈಮುಗಿದು ' ಮಧುಕರನೇ, ಒಳಸಿಕ್ಕ ಕಣ್ಣುಳ್ಳವಳಾದ ನನ್ನ ಆ ಪ್ರಿಯೆಯ ಸುದ್ದಿಯನ್ನೇನಾದರೂ ಹೇಳು. ಆ ಸುಂದರಿಯು ನಿನ್ನ ದೃಷ್ಟಿಗೆ ಬಿದ್ದಂತಿಲ್ಲ. ಯಾಕೆಂದರೆ ನೀನು ಆಕೆಯ ಮುಖದಿಂದ ಹೊರಡುವ ಸುಗಂಧಯುಕ್ತವಾದ ಶ್ವಾಸವನ್ನು ಮೂಸಿನೋಡಿದ್ದರೆ ಈ ಕಮಲದ ಮೇಲೆ ನಿನಗೆ ಪ್ರೀಯುಂಟಾಗುತ್ತಿತ್ತೇ ? ' ಎನ್ನುತ್ತ ಬಹು ದೂರ ಸಾಗಿದನು. ಅಲ್ಲಿ ಹೆಣ್ಣಾನೆಯಿಂದ ಕೂಡಿದ ಗಂಡಾನೆಯು ಅವನ ಕಣ್ಣಿಗೆ ಬಿದ್ದಿತು. ಅದನ್ನುದ್ದೇಶಿಸಿ ರಾಜನು ಅಂದನು : ' ಈ ಗಜ ರಾಜವು ತನ್ನ ಪ್ರಿಯಳೊಂದಿಗೆ ಈ ಆಲದ ಗಿಡದ ಬುಡದಲ್ಲಿ ವಿಶ್ರಮಿಸಿದೆ. ಇದರ ಹತ್ತಿರ ಹೋದರೆ ಏನಾದರೂ ನನ್ನ ಪ್ರಿಯೆಯ ಸುಳಿವು ಹತ್ತಬಹುದು. ಅಷ್ಟರಲ್ಲಿ ತನ್ನ ಮನಸಿನಲ್ಲಿ ಹೀಗೆ ಮಾತನಾಡಿಕೊಂಡನು : ' ಹೆಣ್ಣಾನೆಯ ವಿರಹದಿಂದ ಸಂತಪ್ತವಾದ ಮದೋನ್ಮತ್ತ ಆನೆಯು ಅರಣ್ಯದಲ್ಲಿ ತಿರುಗಾಡುತ್ತದೆ.' ಆ ಆನೆಯು ಏನೋ ತಿನ್ನುತ್ತಿರುವದನ್ನು ಕಂಡು ' ಈ ಹೊತ್ತಿಗೆ ಅದರ ಬಳಿಗೆ ಹೋಗುವದು ಯೋಗ್ಯವಲ್ಲ. ಯಾಕೆಂದರೆ ಅದರ ಪ್ರಿಯತಮೆಯು ತನ್ನ ಸೊಂಡಿಯಿಂದ ಮದ್ಯದಂತೆ ವಾಸಬರುತ್ತಿರುವ ಪಲ್ಲವಗಳನ್ನು ಪ್ರಿಯಕರನಿಗೆ ತಿನಲು ಕೊಡುತ್ತಿದೆ. ಈ ಹೊತ್ತಿಗೆ ನಾನಲ್ಲಿಗೆ ಹೋದರೆ ಅದು ನಾಚಿಕೆಪಟ್ಟುಕೊಳ್ಳುವುದು ' ಎಂದು ವಿಚಾರ ಮಾಡಿ ಅಲ್ಲಿ ಸ್ವಲ್ಪ ಹೊತ್ತು ನಿಂತು ' ತಿನ್ನುವದು ನಿಂತಿತು. ಅದರ ಹತ್ತಿರ ಹೋಗಿ ವಿಚಾರಿಸುತ್ತೇನೆ ' ಎಂದಂದು ಅದನ್ನುದ್ದೇಶಿಸಿ ' ತನ್ನ ಸೊಂಡಿಯಿಂದ ಟೊಂಗೆಗಳನ್ನು ಬಡಿದು ಕೆಡವಿ ವೃಕ್ಷವನ್ನೇ ನಾಶಗೊಳಿಸುವಂಥ ಗಜರಾಜನೇ, ನಾನು ಕೇಳುವ ಪ್ರಶ್ನೆಗೆ ಉತ್ತರವನ್ನು ಕೊಡು. ಚಂದ್ರನ ಕಾಂತಿಯನ್ನು ನಿವಾಳಿಸಿ ಚೆಲ್ಲಿದ ಮುಖವುಳ್ಳವಳಾದ ನನ್ನ ಪ್ರಿಯೆಯು ನಿನ್ನ ಕಣ್ಣಿಗೆ ಎಲ್ಲಾದರೂ ಬಿದ್ದಿರುವಳೇ ? ' ಎಂದಂದು ಎರಡು ಹೆಜ್ಜೆ ಮುಂದೆ ಹೋಗಿ ' ಮದೋನ್ಮತ್ತ ಗಜವೇ, ಮಲ್ಲಿಗೆಯ ಮಾಲೆಯನ್ನು ಮುಡಿದಂಥ, ತಾರುಣ್ಯಭರದಿಂದ ಒಪ್ಪುತ್ತಿರುವಂಥ ನನ್ನ ಪ್ರಿಯೆಯ ದರ್ಶನವು ಉಲ್ಹಾಸಕರವಾಗಿದೆ. ಅಂಥ ನನ್ನಾಕೆಯ ದರ್ಶನವು ನಿನಗೆ ದೂರದಿಂದಾದರೂ ಆಗಿರುವದೇ ? ' ಎಂದು ವಿಚಾರಿಸಿದನು.

ಅಷ್ಟರಲ್ಲಿ ಆ ಆನೆಯು ಗರ್ಜಿಸಿತು. ಅದನ್ನು ಕೇಳಿ ಆನಂದಿತನಾಗಿ ' ಪ್ರಿಯೆಯ ಪ್ರಾಪ್ತಿಯಾಗುವದೆಂದು ಹೇಳುವ ಈ ಆನೆಯ ಈ ಸಣ್ಣ ಗರ್ಜ

ನೆಯು ನನ್ನ ಸಮಾಧಾನವನ್ನು ಮಾಡುತ್ತಿದೆ. ನನ್ನ ಮತ್ತು ನಿನ್ನ ಹೋಲಿಕೆ ಯಲ್ಲಿ ಸಾಮ್ಯವಿರುವದರಿಂದ ನಿನ್ನಲ್ಲಿ ನನಗೆ ಅತ್ಯಂತ ಪ್ರೀತಿಯುಂಟಾಗಿದೆ. ನನಗೆ ರಾಜರ ಅಧಿಪತಿಯೆಂದು ಕರೆಯುತ್ತಾರೆ. ನೀನು ಆನೆಗಳಿಗೆ ರಾಜನಾಗಿ ರುವಿ. ನಿನ್ನ ಗಂಡಸ್ಥಲದಿಂದ ಯಾವಾಗಲೂ ದಾನೋದಕವು ಸೋರುತ್ತಿರು ತ್ತದೆ. ನನ್ನ ಕೈಗಳಿಂದಲೂ ಯಾವಾಗಲೂ ದಾನೋದಕವು ನಡೆದೇ ಇರು ತ್ತದೆ. ಉತ್ತಮೋತ್ತಮ ಸ್ತ್ರೀಯರಲ್ಲಿ ಶ್ರೇಷ್ಠಳಾದ ನನ್ನ ಪ್ರಿಯತಮೆ ಉರ್ವ ಶಿಯು ನನಗೆ ಅತ್ಯಂತ ಪ್ರೀತಿಯುಳ್ಳವಳಾಗಿದ್ದಾಳೆ. ಅದರಂತೆ ನಿನಗೂ ಈ ಹೆಣ್ಣಾನೆಯು ಅನೇಕಾನೇಕ ಹೆಣ್ಣಾನೆಗಳಿಗಿಂತ ಹೆಚ್ಚು ಪ್ರಿಯಕರವಾಗಿರು ತ್ತದೆ. ಎಲ್ಲ ವಿಧದಿಂದಲೂ ನೀನು ನನ್ನನ್ನು ಹೋಲುವಿ. ಆದರೆ ನನಗುಂಟಾ ಗಿರುವ ಪ್ರಿಯೆಯ ವಿರಹದ ಅನುಭವವು ಮಾತ್ರ ನಿನಗಿರುವದಿಲ್ಲ. ಅದು ನಿನ ಗೆಂದಿಗೂ ಆಗಬಾರದು.'

ಆನೆಯು ಏನೂ ಉತ್ತರವೀಯಲಿಲ್ಲೆಂದು 'ನೀನು ಸುಖಿಯಾಗಿರು. ನಾನು ಹೊರಟು ಹೋಗುತ್ತೇನೆ.' ಎಂದೆನ್ನುತ್ತ ಬಹುದೂರ ತೆರಳಿದನು. ಅಲ್ಲಿ ಅವನ ಕಣ್ಣಿಗೆ ಸುರಭಿಕಂದರವೆಂಬ ಹೆಸರಿನ ಪರ್ವತವು ಕಾಣಿಸಿತು. ಅದನ್ನು ಕಂಡು 'ಎಷ್ಟು ರಮಣೀಯವಾಗಿದೆ ಈ ಸುರಭಿಕಂದರ ಪರ್ವತವು ! ಇದು ಅಪ್ಸರೆಯರಿಗೆ ಬಹು ಇಷ್ಟವಾದ ಪರ್ವತವು. ಆದಕಾರಣ ನನ್ನ ಪ್ರಿಯೆಯು ಇಲ್ಲಿಯೇ ಎಲ್ಲಾದರೂ ಇದ್ದಿರಬಹುದು; ಬೆಟ್ಟಿಯೂ ಆಗಬಹುದು.' ಎಂದು ವಿಚಾರಮಾಡಿ ಮುಂದೆ ಹೋಗಲು ಪ್ರಯತ್ನಿಸುವಷ್ಟರಲ್ಲಿ ಕತ್ತಲೆಯಾಯಿತು. ಆಗ ಆಕಾಶದ ಕಡೆಗೆ ನೋಡುತ್ತ 'ಕತ್ತಲೆಯು ಬಿದ್ದರೂ ಚಿಂತೆಯಿಲ್ಲ. ಮಿಂಚಿನ ಬೆಳಕಿನಿಂದ ಆಕೆಯನ್ನು ಹುಡುಕಿ ತೆಗೆಯುವೆನು' ಎಂದು ಪುನಃ ಆಕಾಶದ ಕಡೆಗೆ ನೋಡಿ ಮಿಂಚೇ ಇರುವದಿಲ್ಲೆಂದು ಕಂಡು ನನ್ನ ದುಷ್ಕರ್ಮದ ಪರಿಣಾಮದಿಂದ ಈ ಮೇಘವೂ ಕೂಡ ಮಿಂಚನ್ನು ಚಮಕಿಸದೆ ಮಳೆಗರೆ ಯುತ್ತಿರುವದಲ್ಲ ! ಏನೇ ಇದ್ದರೂ ಈ ಪರ್ವತವನ್ನು ನನ್ನ ಪ್ರಿಯೆಯ ವಿಷಯವಾಗಿ ವಿಚಾರಿಸದೆ ಹಿಂದಿರುಗುವದಿಲ್ಲ' ಎಂದನು.

ಅಷ್ಟರಲ್ಲಿ ತನ್ನೊಳಗೇ ತಾನೇ 'ಅತ್ಯಂತ ಬಿರುಸಾಗಿರುವ ತನ್ನ ಕೋರೆ ಗಳಿಂದ ಭೂಮಿಯನ್ನು ಕೆದರಿ, ಕೆದರಿ ಸ್ತಬ್ಧವಾಗಿ ಬಿದ್ದುಕೊಂಡಿರುವ ಈ

ಅಡವೀ ಹಂದಿಯು ತನ್ನ ಕರ್ತವ್ಯದ ವಿಷಯವಾಗಿ ವಿಚಾರಮಾಡುತ್ತ ತಿರುಗುತ್ತಿರುತ್ತದೆ ' ಎಂದಂದುಕೊಂಡು, ಆ ಪರ್ವತಕ್ಕೆ ಕೈಜೋಡಿಸಿ ' ಅಪ್ರತಿಮರೂಪಿಣಿಯಾದ ನನ್ನ ಪ್ರಿಯೆಯು ನಿನ್ನ ಶಿಖರಗಳಲ್ಲಿ ಎಲ್ಲಿಯಾದರೂ ಕುಳಿತುಕೊಂಡಿರುವದನ್ನು ನೋಡಿರುವಿಯಾ ಹೇಗೆ ? ಮದನನನ್ನು ಸ್ವೀಕರಿಸಿದ್ದರಿಂದ ಅತಿ ರಮ್ಯವಾಗಿ ಕಾಣುವ ಅವಳ ನಡುವು ವಿಸ್ತಾರಗೊಂಡಿರುವದು. ಅಂಥವಳು ನಿನ್ನ ವಿಸ್ತೀರ್ಣವಾದ ಸ್ಥಳದಲ್ಲಿ ಎಲ್ಲಾದರೂ ಇರಬೇಕು. ಶೋಧಿಸಿ ನೋಡುವಿಯಾ ?' ಎಂದನು. ಪರ್ವತವು ಉತ್ತರಿಸಿದೆ ಸುಮ್ಮನಿದ್ದುದನ್ನು ಕಂಡು ' ಏಕೆ ಗಪ್ಪುಚಿಪ್ಪಾಗಿರುವೆ ? ಅಥವಾ ನಾನು ದೂರ ನಿಂತು ಬೇಡಿಕೊಳ್ಳುತ್ತಿರುವದರಿಂದ ಅದಕ್ಕೆ ಕೇಳಿಸಿತೋ ಇಲ್ಲವೋ ! ಆದ್ದರಿಂದ ಅದರ ಬಳಿಗೆ ಹೋಗಿ ವಿಚಾರಿಸುವೆನು ' ಎಂದು ವಿಚಾರಮಾಡಿ ಪರ್ವತದ ಸಮೀಪಕ್ಕೆ ಹೋಗಿ ' ನಿನ್ನ ಬಿಳಿಸಂಗಮರವರಿ ಕಲ್ಲುಗಳ ಮೇಲಿಂದ ನೀರು ಹರಿಯುತ್ತಿರುವಂಥ, ಅನೇಕ ಪುಷ್ಪಗಳಿಂದ ಪೂಜೆಯನ್ನು ಮಾಡಿಸಿಕೊಳ್ಳುವಂಥ, ಕಿನ್ನರರ ಗಾಯನದಿಂದ ಮನೋಹರವಾಗಿ ಕಾಣುವಂಥ ಪರ್ವತವೇ, ನನ್ನ ಪ್ರಿಯತಮೆಯು ಎಲ್ಲಿರುವಳೆಂಬದನ್ನು ತೋರಿಸು. ಪರ್ವತನಾಥನೇ, ಸರ್ವಾಂಗ ಸುಂದರಳಾದ, ನನ್ನಿಂದ ಅಗಲಿಹೋದ, ಏಕಾಕಿಯಾದ ಸ್ತ್ರೀಯೊಬ್ಬಳು ಇಲ್ಲಿ ತಿರುಗಾಡಿದುದು ನಿನ್ನ ದೃಷ್ಟಿಗೆ ಬಿದ್ದಿಲ್ಲವೇ ?' ಎಂದು ಅಲ್ಲಿಯ ಗುಹೆಯ ಬಾಯಿ ಬಳಿಯಲ್ಲಿ ಬಂದು ಮಾತನಾಡಿದನು. ಆ ಗುಹೆಯಿಂದ ಅದೇ ಪ್ರತಿಧ್ವನಿಯು ಮಾತ್ರ ಕೇಳಿಸಿತು. ಅದರಿಂದ ಆನಂದಿತನಾಗಿ ' ಇದೇನು ! ನಾನು ಅಂದಂತೆಯೋ ಕೇಳಬಂದಿತಲ್ಲಾ ! ಇದರಿಂದ ಇದು ಅವಳನ್ನು ಕಂಡಿರಬೇಕು ಎಂದೆನಿಸುತ್ತದೆ. ಅಂದಮೇಲೆ ನಾನವಳ ಶೋಧ ಮಾಡಲೇಬೇಕು.' ಎನ್ನುತ್ತ ಸುತ್ತಲೂ ನೋಡಿ ಖಿನ್ನ ಮನಸ್ಕನಾಗಿ ' ಈ ಗುಹೆಯು ನಾನು ನುಡಿದಂತೆಯೇ ಪ್ರತಿಧ್ವನಿ ಮಾಡಿತು. ಈ ಪರ್ವತವೇನು ನನಗೆ ಉತ್ತರಗೊಟ್ಟೀತು ?' ಎಂದಂದು ರಾಜನು ಮೂರ್ಛೆಹೋದನು. ಕೆಲ ಹೊತ್ತಿನ ಮೇಲೆ ಸಾವಧಾನನಾಗಿ ದುಃಖದಿಂದ ' ಹಾ ! ತಿರುಗಾಡಿ ತಿರುಗಾಡಿ ನನಗೆ ದಣಿವಾಗಿದೆ. ಈ ಪರ್ವತದೊಳಗಿಂದ ಹರಿಯುತ್ತಿರುವ ಈ ನದಿಯ ದಂಡೆಗೆ ಹೋಗಿ ಕುಳಿತುಕೊಂಡು ಪ್ರವಾಹದ ಮೇಲಿಂದ ಹಾಯ್ದು ಬರುವ ಶೀತಲವಾಯುವನ್ನು ಸೇವಿಸುತ್ತೇನೆ ' ಎನ್ನುತ್ತ ಅಲ್ಲಿಗೆ ಧಾವಿಸಿದನು.

ರಾಜನು ಹರಿಯುವ ಹೊಳೆಯ ಶೋಭೆಯನ್ನು ಕಂಡು ' ಮಳೆಬಿದ್ದುದರಿಂದ ನೀರು ರಾಡಿಯಾಗಿ ಹರಿಯುತ್ತಿರುವ ಈ ಪ್ರವಾಹವನ್ನು ನೋಡಿ ನನ್ನ ಮನಸಿಗೆ ಸಮಾಧಾನವಾಗುತ್ತಿದೆ. ನನಗಂತೂ ಇದು ನನ್ನ ಪ್ರಿಯೆಯೆಂದೇ ಕಲ್ಪನೆಯಾಗುತ್ತಿದೆ. ಇದರ ನೀರಿನಲ್ಲುಂಟಾಗುವ ಅಂಕಡೊಂಕ ತೆರೆಗಳೇ ಹುಬ್ಬಿನಂತೆಯೂ ಮೇಲಿನಿಂದ ಸಾಲುಸಾಲಾಗಿ ಹಾರಾಡುವ ಪಕ್ಷಿಗಳ ಪಂಕ್ತಿಯೇ ನಡುಪಟ್ಟಿಯಂತೆಯೂ, ತರಂಗಗಳಿಂದ ಹಿಂದುಮುಂದಕ್ಕೆ ಸರಿಯುತ್ತಿರುವಂಥ—ದಂಡೆಗೆ ಬಂದಿರುವ ನೊರೆಯೇ—ಸಡಿಲಾದ ವಸ್ತ್ರವೆಂಬಂತೆಯೂ, ದೊಡ್ಡ ದೊಡ್ಡ ಕಲ್ಲುಗಳೇ ಕಾಲುಗಳಂತೆಯೂ ಇರುವ ನನ್ನ ಸಿಟ್ಟಿನ ಉರ್ವಶಿಯೇ ಈ ನದಿಯ ರೂಪದಿಂದ ನನ್ನೆದುರಿಗೆ ಬಂದಂತೆ ಭಾಸವಾಗುತ್ತಿದೆ. ನಾನು ಇನ್ನು ಇವಳನ್ನು ಪ್ರಸನ್ನೀಕರಿಸಿಕೊಳ್ಳುವೆನೆಂದು ಆ ನದಿಗೆ ನಮಸ್ಕರಿಸಿ ' ಪ್ರಿಯಳಾದ ಸುಂದರಿಯೇ, ಪ್ರಸನ್ನಳಾಗು. ನಿನ್ನ ದಂಡೆಯ ಮೇಲಿರುವ ಪಕ್ಷಿಸಮೂಹವು ಯಾವ ಪ್ರಬಲ ಪ್ರವಾಹದಿಂದ ಗಾಬರಿಯಾಗಿರುವವೋ ಅಂಥ ನೀನು ನನ್ನ ನಮಸ್ಕಾರದಿಂದ ಪ್ರಸನ್ನನಾಗು. ನಿನ್ನ ದಂಡೆಯ ಮೇಲೆ ವಿಹರಿಸುತ್ತಿರುವ ಜಿಂಕೆಗಳಿಂದ, ಝೇಂಕರಿಸುವ ಭ್ರಮರಗಳಿಂದ ಶೋಭಿಸುವ ನದೀರೂಪಿಣೀ ಸ್ತ್ರೀಯೇ ಪ್ರಸನ್ನಳಾಗು ' ಎಂದು ಬೇಡಿಕೊಂಡನು.

' ಪೂರ್ವದಿಶೆಯಿಂದ ಬೀಸುವ ಗಾಳಿಯಿಂದ ಎದ್ದಂಥ ತರಂಗಗಳೇ ಯಾರೋ ಎತ್ತಿದ ಭುಜಗಳಂತಿರುವ ಜಲಘನಾಘನೇ, ಹಂಸ. ಚಕ್ರವಾಕ, ಶಂಖ ಮೊದಲಾದವುಗಳಿಂದ ವೇಷ್ಟಿತಳಾಗಿರುವಿ. ದಂಡೆಗೆ ತರಂಗಗಳು ಬಡಿಯುವದರಿಂದ ಉಂಟಾಗುವ ಶಬ್ದವೇ ಯಾರೋ ಕೈಗಳಿಂದ ಚಪ್ಪಾಳೆ ತಟ್ಟುತ್ತಿರುವಂತೆ ಭಾಸವಾಗಿ, ಈ ಪರ್ಜನ್ಯ ಕಾಲದ ಆರಂಭವು ದಶದಿಕ್ಕುಗಳನ್ನು ವ್ಯಾಪಿಸಿಬಿಟ್ಟಿದೆ.'

ಭೂಮಿಯ ಮೇಲೆ ಮೊಣಕಾಲೂರಿ ನಿಂತು ಈ ನದಿಯೇ ಪ್ರತ್ಯಕ್ಷ ಉರ್ವಶಿಯೇ ಎಂದು ಮನ್ನಿಸಿ, ಕೈಜೋಡಿಸಿ ' ಯಾರ ಪ್ರೇಮವು ನಿನ್ನಲ್ಲಿ ಅತ್ಯಂತವಾಗಿದೆಯೋ, ಯಾರು ನಿನ್ನೊಡನೆ ಯಾವಾಗಲೂ ಸವಿಮಾತುಗಳನ್ನಾಡುವರೋ, ನೀನು ಏನು ಹೇಳಿದರೂ ಯಾರು ಅದನ್ನು ಭಂಗಿಸಲು

ಬೆದರುವರೋ ಅಂಥ ಈ ದಾಸನನ್ನು ನೀನು ತ್ಯಜಿಸಿರುವಿ. ಹಾಗೆ ತ್ಯಜಿಸಲು ನನ್ನಿಂದ ಸಂಭವಿಸಿದ ಅಪರಾಧಪಾದರೂ ಯಾವುದಾಗಿದೆ ?'

ನದಿಯು ಯಾವ ಉತ್ತರವವನ್ನೂ ಕೊಡದಿದ್ದುದನ್ನು ಕಂಡು 'ಸುಮ್ಮ ನೇಕೆ ಕುಳಿತಿರುವಿ ? ನಿಜವಾಗಿಯೋ ಇದು ನದಿಯೋ; ಉರ್ವಶಿಯಲ್ಲವೇ ಅಲ್ಲ. ಇಲ್ಲದಿದ್ದರೆ ಇವಳು ಪುರೂರವನನ್ನು ಬಿಟ್ಟು ಸಮುದ್ರವನ್ನು ಅನು ಸರಿಸುತ್ತಿದ್ದಳೇಕೆ ? ಒಳ್ಳೆಯ ಸಂಗತಿಗಳು ಜರುಗಬೇಕಾದರೆ ನಿರುತ್ಸಾಹ ದಿಂದೆಂದೂ ಜರುಗುವದಿಲ್ಲ. ನನ್ನ ಪ್ರಿಯೆಯು ಎಲ್ಲಿ ಗುಪ್ತವಾಗಿರುವಳೋ ಅಲ್ಲಿಯೇ ಅವಳನ್ನು ಹುಡುಕುವೆನು ' ಎನ್ನುತ್ತ ಆ ಸ್ಥಳದೆಡೆಗೆ ಸಾಗಿದನು.

ಅಷ್ಟರಲ್ಲಿ ಚಿಗುರೆಯೊಂದು ಅವನ ಕಣ್ಣಿಗೆ ಬಿದ್ದಿತು. ಅದನ್ನು ನೋಡಿ ' ಈ ಚಿಗುರೆಯನ್ನಾದರೂ ಕೇಳಿ ನೋಡೋಣ.' ಏನಾದರೂ ಸಂಗತಿಯನ್ನು ಹೇಳುವದೇನೋ ನೋಡೋಣ ' ಎಂದು ತನ್ನಷ್ಟಕ್ಕೆ ತಾನೇ ಅಂದುಕೊಳ್ಳ ತೊಡಗಿದನು. ಹೊಸ ಹೊಸ ಹೂಗಳಿಂದ ನಿಬಿಡವಾದ ಗಿಡಗಳ ಒಳಿಯಲ್ಲಿ ಉನ್ಮತ್ತವಾದ ಕೋಕಿಲದ ಮಧುರ ಶಬ್ದದಿಂದಲೂ, ಭ್ರಮರಗಳ ಗುಂಜಾ ರವದಿಂದ ಮನೋಹರವಾಗಿ ಕಾಣುವ ನಂದನವನದಲ್ಲಿ ತನ್ನ ಹೆಣ್ಣಾನೆಯ ವಿರಹಾಗ್ನಿಯಿಂದಲೂ ಸಂತಪ್ತವಾಗಿರುವ ಐರಾವತವೆಂಬ ಹೆಸರಿನ ಗಜಾಧಿ ಪತಿಯು ಇಲ್ಲಿ ತಿರುಗಾಡುತ್ತಿದ್ದಾನೆ.'

' ದೇವತೆಗಳ ಸ್ತ್ರೀಯಾದ ನನ್ನ ಪ್ರಿಯೆಯು ನಡೆದ ಭಾರದಿಂದ ಮೆಲ್ಲ ಮೆಲ್ಲನೆ ನಡೆಯುತ್ತಾಳೆ. ಪುಷ್ಟವಿದ್ದೂ ಉದ್ದವಾಗಿರುವ ಸ್ತನಗಳು ಅವಳ ಗಿವೆ. ಅವಳ ತಾರುಣ್ಯವು ಚಿರಸ್ಥಾಯಿಯಾಗಿದೆ. ಶರೀರ ಗಾತ್ರವು ಮಾಟಾಗಿದ್ದು ಅವಳ ನಡಿಗೆಯು ಹಂಸಗತಿಯನ್ನು ನಾಚಿಸುತ್ತಿದೆ. ಆಕಾಶದಷ್ಟೇ ಹೊಳೆ ಯುವ ಅರಣ್ಯದಲ್ಲಿ ಪರಿಭ್ರಮಿಸುವ ಆ ಮೃಗನಯನೆಯನ್ನು ಕಂಡಿರು ವೆಯಾ ? ನೋಡಿದ್ದರೆ ಹೇಳು. ನನ್ನನ್ನು ಈ ವಿರಹಸಮುದ್ರದಿಂದ ಎತ್ತು' ಎಂದೆನ್ನುತ್ತ ಅದರ ಸಮೀಪಕ್ಕೆ ಹೋಗಿ ಕೈಜೋಡಿಸಿ ' ಹರಿಣವೇ, ನೀನು ಇಲ್ಲಿ ತಿರುಗುತ್ತಿರುವಾಗ ನನ್ನ ಪ್ರಿಯೆಯು ನಿನ್ನ ಕಣ್ಣಿಗೆ ಬಿದ್ದಿರುವಳೇ ? ಅವಳ ಗುರುತು ನಿನಗಿರಲಿಕ್ಕಿಲ್ಲ. ಹೇಳುತ್ತೇನೆ ಕೇಳು. ಅವಳು ವಿಶಾಲ ನಯನಗಳುಳ್ಳವಳು. ನಿನ್ನ ಹರಿಣಿಯಂತೆ ಕಾಣುತ್ತಾಳೆ' ಎಂದನು.

ಹರಿಣವು ಹರಿಣಿಯ ಕಡೆಗೆ ಮುಖದಿರುವಿ ನಿಂತುದನ್ನು ಕಂಡು 'ನಾನು ಇವಕ್ಕೆ ಬೇಡಿಕೊಳ್ಳುತ್ತಿದ್ದರೂ ನನ್ನನ್ನು ಅನಾದರ ಮಾಡಿ ಇದು ತನ್ನ ಹೆಂಡತಿಯ ಮುಖವನ್ನು ನೋಡುತ್ತ ನಿಂತಿರುವದೆಂದರೇನು ? ಆದರೆ ಇದೇನು ಆಶ್ಚರ್ಯದ ಮಾತಲ್ಲ. ಅದು ಮಾಡಿದುದು ಯಥಾಯೋಗ್ಯವೇ ಆಗಿದೆ. ದೈವವು ಪ್ರತಿಕೂಲವಾದರೆ ಹೀಗೆ ಅಪಮಾನವಾಗಿಯೇ ತೀರುವದು. ಆಯಿತು; ಇನ್ನೊಂದು ಕಡೆಗೆ ಹೋಗುತ್ತೇನೆ' ಎಂದು ಮುಂದೆ ಸಾಗಿದನು. ಸ್ವಲ್ಪ ದೂರ ಹೋದ ಮೇಲೆ ಕೆಂಪು ಕದಂಬ ವೃಕ್ಷವು ಕಣ್ಣಿಗೆ ಬಿದ್ದಿತು. ಅದನ್ನು ನೋಡಿ 'ಈಗ ಮಾತ್ರ ಆ ನನ್ನ ಪ್ರಿಯೆಯು ಯಾವ ಕಡೆಗೆ ಹೋಗಿರುವಳೆಂಬುದರ ಸುಳಿವು ಚೆನ್ನಾಗಿ ತಿಳಿಯಿತು. ಇದೇ ಆ ವೃಕ್ಷವು. ಬಿಸಿಲುಗಾಲದ ಬರವನ್ನು ಸೂಚಿಸುವ ಈ ವೃಕ್ಷದ ಹೂಗಳು ಪೂರ್ಣ ಕೇಸರ ವರ್ಣದವುಗಳಾಗದಿದ್ದರೂ ನನ್ನ ಪ್ರಿಯೆಯು ಅವುಗಳನ್ನು ಧರಿಸುತ್ತಿದ್ದಳು' ಎಂದನು.

ಪುರೂರವ ರಾಜನು ಹೀಗೆ ವಿರಹಗೊಂಡು ಅಡವಿಯನ್ನು ಸುತ್ತುತ್ತಿದ್ದನು. ಮಳೆಯಂತೂ ಬಿಟ್ಟೂಬಿಡದೆ ಹಣಿಯುತ್ತಿತ್ತು. ಮನವು ತಾಳಗೆಟ್ಟಿದ್ದರಿಂದ ಮೇಲಿಂದಮೇಲೆ ಎಡವಿ ಮುಗ್ಗರಿಸುತ್ತಿದ್ದನು. ಕಾಲುಗಳಿಗೆ ಮುಳ್ಳು ನಡುತ್ತಿದ್ದವು. ಹೊಟ್ಟೆಯಲ್ಲಿ ನೀರಿಲ್ಲ. ಅನ್ನವಂತೂ ಇಲ್ಲವೇ ಇಲ್ಲ. ಇಂಥ ಸ್ಥಿತಿಯಲ್ಲಿ ತಿರುಗಾಡುತ್ತಿರುವಾಗ ಅವನಿಗದೆಷ್ಟು ದುಃಖವಾಗಿರಬೇಕು ! ಅವನ ಮೈಯಲ್ಲಿ ಎಚ್ಚರವಿದ್ದಿಲ್ಲೆಂಬವೇ ನೆಟ್ಟಗಿತ್ತು. ಇಲ್ಲದಿದ್ದರೆ ಅವನಿಗೆ ದುಃಖದ ಅನುಭವವು ಪೂರ್ಣವಾಗಿ ಆಗುತ್ತಿತ್ತು. ಅದರಲ್ಲಿ ಈ ವಿರಹಯಾತನೆಯ ಪರಿಣಾಮವು ಅತ್ಯಂತ ಹೃದಯದ್ರಾವಕವಿರುತ್ತದೆ. ಸರ್ವ ಪೃಥ್ವಿಯ ರಾಜ್ಯವನ್ನೇ ಪ್ರತ್ಯಕ್ಷವಾಗಿ ಆಳುತ್ತಿರುವ ಚಂದ್ರನ ಮೊಮ್ಮಗನೂ ಜಗತ್ತನ್ನೇ ಸೃಷ್ಟಿಸುವಂಥ ಬ್ರಹ್ಮನ ಮರಿಮಗನೂ, ತ್ರೈಲೋಕ್ಯಾಧಿಪತಿಯಾದ ಇಂದ್ರನ ಪರಮಮಿತ್ರನೂ ಆದ ರಾಜಾ ಪುರೂರವನಿಗೆ ಇಂಥ ವಿಷಮ ಪರಿಸ್ಥಿತಿಯು ಬರಬೇಕೆಂದರೆ ಏನು ? ಇದೆಲ್ಲವೂ ವಿಷಯಾಸಕ್ತಿಯ ಪರಿಣಾಮವಲ್ಲದೆ ಮತ್ತೇನು ! ಕಾಮ್ಯಾಸಕ್ತ ಪುರುಷರಿಗೆ ಪ್ರಿಯೆಯು ಅಗಲಿದ ಹೊತ್ತಿನಲ್ಲಿ ಹತ್ತು ಅವಸ್ಥೆಗಳುಂಟಾಗುತ್ತವೆ. ಅವುಗಳಲ್ಲಿ ಒಂಬತ್ತನೆಯದಾದ ಉನ್ಮಾದಾವಸ್ಥೆಯಂತೂ ಅವನಿಗೆ ಪ್ರಾಪ್ತವಾಗಿಯೇ ಬಿಟ್ಟಿತ್ತು. ಈ

ಅವಸ್ಥೆಯಲ್ಲಿ ಪ್ರಿಯಕರಳ ಸಮಾಗಮವಾಗಿ ಅವನ ದುಃಖವು ಪರಿಹಾರವಾಗದಿದ್ದರೆ ಅವನಿಗೆ ಹತ್ತನೆಯ ಅವಸ್ಥೆಯೆಂದರೆ ಮರಣವು ಪ್ರಾಪ್ತವಾಗಬಹುದಿತ್ತು; ಆದರೆ ಅವನ ಸುದೈವದಿಂದ ಆ ಯೋಗವು ಒದಗಿಬರಲಿಲ್ಲ. ಚಿತ್ರಲೇಖೆಯು ಯಾವ ಸಂಗಮಮಣಿಯ ಹೆಸರನ್ನು ತೆಗೆದುಕೊಂಡಿದ್ದಳೋ ಅಂಥ ಆ ಮಣಿಯು ಅಕಸ್ಮಾತ್ತಾಗಿ ಅವನ ಕಣ್ಣಿಗೆ ಬಿದ್ದಿತು. ಅವನ ದುರ್ದೆಶೆಯು ಕೊನೆಗೊಳ್ಳುವ ಕಾಲವು ಬೇಗನೆ ಬಂದಿತು. ಅವನ ದೃಷ್ಟಿಯು ಸಹಜವಾಗಿ ಆ ಮಣಿಯತ್ತ ಬಿದ್ದಿತು; ಆದರೆ ಅದರ ಗುರುತು ಅವನಿಗಿರಲಿಲ್ಲವೆಂದು ರಾಜನು 'ಇದೇನು ? ಎಷ್ಟು ಕೆಂಪಾಗಿ ಹೊಳೆಯುತ್ತಿದೆಯಲ್ಲ— ಈ ಪರ್ವತದಲ್ಲಿ ? ಸುತ್ತಲೂ ಅದರ ಕಿರಣಗಳು ಹರಡಿವೆ. ಸಿಂಹವು ಮುರಿದ ಆನೆಯ ತಲೆಯ ತುಂಡಂತೂ ಆಗಿರಲಾರದು ! ಬೆಂಕಿಯ ಕಿಡಿಯೆನಬೇಕೆ ? ಇದೀಗ ಮಳೆಬಿದ್ದಿದೆ. ಅದರಿಂದ ಅದು ಬೆಂಕಿಯ ಕಿಡಿಯಾಗಲಾರದು. ಅಶೋಕ ವೃಕ್ಷದ ಕೆಂಪುಹೂವಿನ ಗುಚ್ಛದಂತೆ ಬಣ್ಣವಿರುವ ಯಾವುದೋ ಒಂದು ಮಣಿಯಾಗಿರಬೇಕು. ಅದನ್ನು ಎತ್ತಬೇಕೆಂದು ಸೂರ್ಯನು ತನ್ನ ಕೈಗಳನ್ನು ಚಾಚಿರುವನೋ ಏನೋ ಅನ್ನುವಂತೆ ಅದು ಭಾಸವಾಗುತ್ತಿದೆ. ಏನೇ ಆಗಲೊಲ್ಲದು— ನಾನಿದನ್ನು ತೆಗೆದುಕೊಳ್ಳುತ್ತೇನೆ ' ಎಂಬ ವಿಚಾರಲಹರಿಯಲ್ಲಿರುವಾಗ, ಅವನ ಲಕ್ಷವು ಆನೆಯ ಕಡೆಗೆ ಹೊರಳಿ 'ಯಾವನಿಗೆ ತನ್ನ ಪ್ರಿಯೆಯ ಧ್ಯಾನ ಹತ್ತಿದೆಯೋ, ಯಾರ ಕಣ್ಣು ನೀರಿನಿಂದ ತುಂಬಿರುವವೋ, ಯಾರ ಮುಖವು ಬಾಡಿ ಬತ್ತಿಹೋಗಿದೆಯೋ ಅಂಥ ಗಜಪತಿಯು ದುಃಖಿತವಾಗಿ ಅರಣ್ಯವನ್ನು ಪ್ರವೇಶಿಸುತ್ತಿದೆ ' ಎಂದುಕೊಂಡನು.

ಮಣಿಯನ್ನು ಕೈಯಲ್ಲಿ ತೆಗೆದುಕೊಂಡು 'ಕಲ್ಪವೃಕ್ಷದ ಹೂಗಳಿಂದ ಸುವಾಸಿತವಾದ ನನ್ನ ಪ್ರಿಯೆಯ ಹೆಳಲಿನಲ್ಲಿ ಇದನ್ನು ಹಾಕಬೇಕಾಗಿತ್ತೋ ಅಂಥ ನನ್ನ ಪ್ರಿಯಕರಳು ದುರ್ಲಭವಾಗಿದ್ದಾಳೆ ! ಆದಕಾರಣ ನಾನಿದನ್ನು ನನ್ನ ದುಃಖಾಶ್ರುಗಳಿಂದ ತೋಯಿಸಲೇಕೆ ?' ಎಂದಂದು ಆ ಮಣಿಯನ್ನು ಚೆಲ್ಲಿಕೊಟ್ಟನು.

ರಾಜನು ಆ ಮಣಿಯನ್ನೇನೋ ಚೆಲ್ಲಿಕೊಟ್ಟದ್ದು ನಿಜ; ಆದರೆ ಅವನಿಗೆ ಅದರ ಪರಿಚಯವಾಗಿರಲಿಲ್ಲ. ಯಾಕೆಂದರೆ ಚಿತ್ರಲೇಖೆಯು ಯಾವ ಸಂಗಮ

ಮಣಿಯಿಂದ ಉರ್ವಶಿಯ ಸಮಾಗಮವಾಗುವದೆಂದು ಸಹಜನ್ಯೆಗೆ ಹೇಳಿ ಸ್ವಳೋ ಅದೇ ಮಣಿಯೇ ಇದಾಗಿದ್ದಿತು. ರಾಜನು ಇದರ ಗುಟ್ಟನ್ನರಿಯದೆ ಚೆಲ್ಲಿಕೊಟ್ಟಿರುವನೆಂಬದನ್ನು ಆಕಾಶದಲ್ಲಿ ಉದಯವಾಗುತ್ತಿರುವ ಚಂದ್ರನು ನೋಡಿ 'ವತ್ಸಾ ಪುರೂರವಾ, ಆ ಮಣಿಯನ್ನು ಕೈಯಲ್ಲಿ ತೆಗೆದುಕೋ. ಚೆಲ್ಲಬೇಡ. ಅದರ ಹೆಸರು ಸಂಗಮಮಣಿ. ಇದು ಪಾರ್ವತಿಯ ಪಾದರಜ ದಿಂದ ಉತ್ಪನ್ನವಾಗಿದೆ. ಇದನ್ನು ಧರಿಸಿಕೊಂಡಿದ್ದರೆ ಬೇಗನೆ ಪ್ರಿಯಜನರ ಸಮಾಗಮವು ಆಗುವದು. ಅದು ಅಷ್ಟು ಪ್ರಭಾವಶಾಲಿಯಾದ ಮಣಿ ಯಾಗಿದೆ' ಎಂದು ಹೇಳಿದನು.

ಈ ಹೊತ್ತಿನಲ್ಲಿ ಅಲ್ಲಿ ಯಾರೂ ಇರಲಿಲ್ಲ. ಅಕಸ್ಮಾತ್ತಾಗಿ ಆ ಭಾಷಣ ವನ್ನು ಕೇಳಿ ರಾಜನಿಗೆ ಬಲು ಆಶ್ಚರ್ಯವಾಯಿತು. ಅವನು ಮುಖವನ್ನು ಮೇಲೆತ್ತಿ 'ನನಗಿದನ್ನು ಹೇಳಿದವರಾರು?'—ಎಂದು ವಿಚಾರಮಾಡುತ್ತ ಚಂದ್ರನೇ ಹೇಳಿರಬೇಕೆಂದು ಬಗೆದು 'ಹರಿಣಧಾರಿಯಾದ ನನ್ನ ಅಜ್ಜನೇ ನನಗೆ ಈ ಆಜ್ಞೆ ವಿಧಿಸಿದ್ದಾನೆ. ಅವನನ್ನು ಬಿಟ್ಟು ಇನ್ನಾರು ನನ್ನ ಯೋಗ ಕ್ಷೇಮವನ್ನು ಚಿಂತಿಸುವವರು?' ಎಂದೆಂದು ರಾಜನು ಚಂದ್ರನಿಗೆ ವಂದನೆ ಗಳನ್ನರ್ಪಿಸಿ 'ಭಗವಾನ್ ಚಂದ್ರಮನೇ, ನನಗೆ ಈ ಉಪದೇಶವನ್ನು ಮಾಡಿ, ನನ್ನ ಮೇಲೆ ದೊಡ್ಡದೊಂದು ಉಪಕಾರವನ್ನು ಹೊರಿಸಿರುವಿ' ಎಂದು ಅವನ ಸ್ತುತಿಯನ್ನು ಮಾಡಿ ಚೆಲ್ಲಿಕೊಟ್ಟ ಆ ಮಣಿಯನ್ನು ಎತ್ತಿಕೊಂಡು 'ಸಂಗಮ ಮಣಿಯೇ, ಸಣ್ಣ ನಡವುಳ್ಳ ನನ್ನ ಪ್ರಿಯೆಯಿಂದ ವಿಯುಕ್ತನಾದ ನನಗೆ ಅವಳ ಸಮಾಗಮವನ್ನು ಮಾಡಿಸಿಕೊಟ್ಟಿಯೆಂದರೆ ಭಗವಾನ್ ಶಂಕರನು ಬಾಲಚಂದ್ರನನ್ನು ಮಸ್ತಕದಲ್ಲಿ ಯಾವಾಗಲೂ ಧರಿಸಿಕೊಂಡಿರುವಂತೆ ನಾನಾ ದರೂ ನಿನ್ನನ್ನು ನನ್ನ ಚಂಡಿಕೆಯಲ್ಲಿ ಧರಿಸಿಕೊಳ್ಳುವೆನು' ಎಂದು ಅದಕ್ಕೆ ಬಿನ್ನವಿಸಿಕೊಂಡನು.

ಅಷ್ಟರಲ್ಲಿ ಹೂವುಪಾವು ಇಲ್ಲದ ಬಳ್ಳಿಯೊಂದು ಅವನ ಕಣ್ಣಿಗೆ ಬಿದ್ದಿತು. ಉರ್ವಶಿಯು ಆ ಬಳ್ಳಿಯ ರೂಪಧಾರಣ ಮಾಡಿದ್ದಾಳೆಂಬುದೇನು ರಾಜನಿಗೆ ಗೊತ್ತಿರಲಿಲ್ಲ. ಆದಕಾರಣ ಅದೊಂದು ಯಾವುದೋ ಬಳ್ಳಿ ಯೆಂದು ಅದನ್ನುದ್ದೇಶಿಸಿ ಮಾತನಾಡತೊಡಗಿದನು. 'ಈ ಬಳ್ಳಿಯು ಪ್ರಫುಲ್ಲಿತ ವಾಗಿರುವದಿಲ್ಲ. ಆದರೆ ನನ್ನ ಕಣ್ಣುಗಳಿಗೆ ಹಬ್ಬವಾಗಿ ತೋರುತ್ತದೆ. ಮನವು

ರಮಿಸುತ್ತದೆ. ಹೀಗೆನಿಸುವದು ಅಸಮಂಜಸವೇನಲ್ಲ. ಯಾಕೆಂದರೆ ಇದು ಅತ್ಯಂತ ಸುಕುಮಾರವಿದ್ದು, ಅದರ ಎಲೆಗಳ ಮೇಲೆ ಮಳೆಯ ನೀರು ಸುರಿದು ಟಪಟಪವೆಂದು ಹನಿಗಳು ಕೆಳಗೆ ಉದುರಿಬೀಳುತ್ತವೆ. ಅದರಿಂದ ಇದು ತನ್ನ ಅಶ್ರುಜಲದಿಂದ ತನ್ನ ಅಧರೋಷ್ಠವನ್ನು ತೊಳೆದುಕೊಂಡಂತಾಗಿದೆ. ಇದು ಪ್ರಫುಲ್ಲಿತವಾಗಬೇಕಾದ ಸಮಯವು ಇನ್ನೂ ಬಾರದ್ದರಿಂದ ಅಲಂಕಾರ ರಹಿತ ವಾಗಿ ಕಾಣುತ್ತದೆ. ಇದು ಚಿಂತಾಗ್ರಸ್ತವಾಗಿ ಮೌನ ಧರಿಸಿದ್ದರಿಂದ ಇದರಲ್ಲಿ ಭ್ರಮರದ ಗುಂಜಾರವವು ಕೇಳಬರುವದಿಲ್ಲ. ನಾನು ಕಾಲಿಗೆ ಬಿದ್ದು ಬೇಡಿ ಕೊಂಡರೂ ನನ್ನನ್ನು ತ್ಯಜಿಸಿ ಸಿಟ್ಟಿಗೆದ್ದು ಹೋದವಳಿಗೆ ಈಗ ಪಶ್ಚಾತ್ತಾಪ ವಾದಂತೆ ಈ ಬಳ್ಳಿಯು ನನಗೆ ಕಾಣುತ್ತಿದೆ. ಈ ಬಳ್ಳಿಯೇ ನನ್ನ ಪ್ರಿಯಕರ ಳಾಗಿರಲು ಸಾಕು. ಆಲಿಂಗನವನ್ನು ಕೊಡು ಎಂದು ಬೇಡಿಕೊಳ್ಳುತ್ತೇನೆ' ಎಂದು ಅದರ ಸಮೀಪಕ್ಕೆ ಹೋಗಿ 'ಬಳ್ಳಿಯೇ, ನನ್ನ ಹೃದಯವು ತಾಳ ಮೇಳವಿಲ್ಲದೆ ಒದ್ದಾಡುತ್ತಿದೆ. ನನ್ನ ಕಡೆಗೆ ಒಮ್ಮೆ ನೋಡು. ಸುದೈವದಿಂದ ನನ್ನ ಉರ್ವಶಿಯು ಪ್ರಾಪ್ತಳಾದರೆ ನಾನು ಅವಳನ್ನು ಎರಡನೆಯ ಕಡೆಗೆ ಒಯ್ದು, ಪುನಃ ಅವಳು ಅರಣ್ಯವನ್ನು ಪ್ರವೇಶಿಸದಂತೆ ನಿರ್ಬಂಧಿಸುವೆನು' ಎಂದೆಂದು ಅವನು ಆ ಬಳ್ಳಿಯನ್ನು ಗಟ್ಟಿಮುಟ್ಟಿಯಾಗಿ ಅಪ್ಪಿಕೊಂಡನು.

ಈ ಸಮಯದಲ್ಲಿ ಆ ಸಂಗಮಮಣಿಯು ರಾಜನ ಕೈಯಲ್ಲಿಯೇ ಇತ್ತು. ಆದಕಾರಣ ಅದರ ಪ್ರಭಾವದಿಂದ ಬಳ್ಳಿಯಾದ ಉರ್ವಶಿಯು ತನ್ನಮೊದಲಿನ ರೂಪವನ್ನು ಕೂಡಲೇ ಧರಿಸಿದಳು. ರಾಜನು ಯಾವ ಬಳ್ಳಿಯನ್ನು ಬಿಗಿದಪ್ಪಿ ಕೊಂಡಿದ್ದನೋ ಅದೇ ಬಳ್ಳಿಯಲ್ಲಿಯೇ ಉರ್ವಶಿಯು ಪ್ರಕಟವಾದರೂ, ಅವನು ಕಣ್ಣುಮುಚ್ಚಿ ಸ್ಪರ್ಶಸುಖಾನುಭವದಲ್ಲಿ ಮಗ್ನನಾದ್ದರಿಂದ ಅವನಿಗೆ ಆದ ಬದಲಾವಣೆ ಕಾಣಬರಲಿಲ್ಲ. ಬಳ್ಳಿಯ ಸ್ಪರ್ಶವು ಉರ್ವಶಿಯ ಸ್ಪರ್ಶ ವಂತೆಯೇ ಇದೆ ಎಂದು ತಿಳಿದು 'ಉರ್ವಶಿಯ ಅಂಗಸ್ಪರ್ಶದಂತೆಯೇ ನನ್ನ ಶರೀರಕ್ಕೆ ಸಮಾಧಾನವೆನಿಸುತ್ತದೆ. ಆದರೆ ಅವಳೇ ಇರಬೇಕೆಂಬ ವಿಶ್ವಾಸವೇ ನನಗಿಲ್ಲದಾಗಿದೆ. ಯಾಕೆಂದರೆ ಇಲ್ಲಿಯವರೆಗೆ ಯಾವ ಯಾವ ವಸ್ತುಗಳನ್ನು ಅವಳೇ ಎಂದು ಭಾವಿಸಿ ನಾನು ಆನಂದಪಡುತ್ತಿದ್ದೆನೋ ಆ ಆ ವಸ್ತುಗಳು ಭಿನ್ನವಾದ ವಸ್ತುಗಳೆಂದು ಕಾಣಬಂದಿದೆ. ಆದಕಾರಣ ನಾನು ಬಹಳ ಸಲ ಮೋಸಹೋಗಿದ್ದೇನೆ. ಆದರೆ ಈಗ ಈ ಸ್ಪರ್ಶದಿಂದ ಅವಳೇ ಎಂದು ಗುರುತುಹತ್ತಿದ್ದರೂ ನಾನು ಒಮ್ಮೆಲೆ ಕಣ್ಣುಗಳನ್ನು ತೆರೆಯಲಾರೆ' ಎಂದನು.

ಕೆಲ ಸಮಯ ಹಾಗೆಯೇ ಇದ್ದುಕೊಂಡು ಕಣ್ಣು ತೆರೆದು 'ಓಹೋ! ನಿಜವಾಗಿಯೇ ನನ್ನ ಉರ್ವಶಿಯು!' ಎಂದಂದು, ದುಃಖ ಭೋಗಿಸಿದ ಮೇಲೆ ಅವಳ ದರ್ಶನವಾದ ಸುಖದಿಂದ ರಾಜನಿಗೆ ಮೂರ್ಛೆ ಬಂದಿತು. ಉರ್ವಶಿಯು ನಾನಾಪರಿಯಿಂದ ಅವನನ್ನು ಸಂತೈಸಿದಳು. ಅದರಿಂದ ಸಾವ ಧಾನನಾಗಿ 'ಪ್ರಿಯಳೇ, ನನಗೆ ಜೀವ ಬಂದಿತು. ಚಂಡಿಯೇ, ನಿನ್ನ ನಿಯೋಗದಿಂದ ಉತ್ಪನ್ನವಾದ ಅಂಧಕಾರದಲ್ಲಿ ಮುಳುಗೇಳುತ್ತಲಿದ್ದ ನನಗೆ—ನಿರ್ಜೀವನಾದವನಿಗೆ—ಚೈತನ್ಯ ಬಂದರೆ ಹೇಗೆನಿಸುವದೋ ಹಾಗೆ ನೀನು ಪ್ರಾಪ್ತವಾದುದರಿಂದ ನನ್ನ ದೇಹದಲ್ಲಿ ಜೀವವುಂಟಾಯಿತು' ಎಂದನು.

ಉರ್ವಶಿಯು ಕಂಠವು ಉಬ್ಬಿ ಬಂದು, ಕಣ್ಣುಗಳಿಂದ ನೀರು ಸುರಿಸುತ್ತ 'ಮಹಾರಾಜರೇ, ನನ್ನನ್ನು ಕ್ಷಮಿಸಿರಿ. ನಾನು ಸಿಟ್ಟಿನ ಕೈಯಲ್ಲಿ ಬುದ್ಧಿ ಕೊಟ್ಟಿನಾದ್ದರಿಂದ ತಮಗೆ ಇಷ್ಟೆಲ್ಲ ದುಃಖವನ್ನು ಕೊಡಬೇಕಾಯಿತು. ಆದ ಕಾರಣ ನನ್ನನ್ನು ಕ್ಷಮಿಸಬೇಕು' ಎಂದು ಪ್ರಾರ್ಥಿಸಿಕೊಂಡಳು.

'ನೀನು ನನ್ನನ್ನು ಪ್ರಸನ್ನೀಕರಿಸಿಕೊಳ್ಳಬೇಕೆಂದು ಬೇಡಿಕೊಳ್ಳುವದೇ ಬೇಡ. ನಿನ್ನ ದರ್ಶನ ಮಾತ್ರದಿಂದಲೇ ನನ್ನ ಅಂತರಾತ್ಮವೂ, ಸರ್ವ ಇಂದ್ರಿಯಗಳೂ ಸುಪ್ರಸನ್ನವಾಗಿವೆ. ಆದರೆ ಈ ವರೆಗೆ ನೀನು ನನ್ನನ್ನು ಬಿಟ್ಟು ಒಬ್ಬಳೇ ಹೇಗೆ ಕಾಲ ಕಳೆದಿ ಎಂಬದನ್ನು ನನಗೆ ಮೊದಲು ಹೇಳು' ಎಂದು ರಾಜನು ಉರ್ವಶಿಯನ್ನು ವಿಚಾರಿಸಿದನು.

ರಾಜನು ಇಲ್ಲಿಯವರೆಗೆ ಉರ್ವಶಿಯ ವಿರಹದಿಂದ ದುಃಖಿತನಾಗಿ ಅಸ್ವಸ್ಥ ಚಿತ್ತದಿಂದ ಭ್ರಮಿಷ್ಟನಾಗಿದ್ದನು. ಈಗ ಅವನು ಅವಳ ಸಮಾಗಮ ಸುಖದಿಂದ ಆನಂದಿತನಾಗಿ ಶುದ್ಧಿಯ ಮೇಲೆ ಬಂದಿದ್ದನು. 'ನೀನು ನನ್ನಿಂದ ಅಗಲಿ ಹೋದಾಗ ನಾನು ಈ ಅರಣ್ಯವನ್ನೆಲ್ಲ ಸುತ್ತಾಡುತ್ತ ನವಿಲು, ಕೋಕಿಲ, ಹಂಸ, ಚಕ್ರವಾಕ, ಭ್ರಮರ, ಆನೆ, ಪರ್ವತ, ನದಿ, ಚಿಗರೆ ಮೊದಲಾದವುಗಳನ್ನು ನಿನ್ನ ಸುದ್ದಿಯ ಬಗ್ಗೆ ವಿಚಾರಿಸುತ್ತ ಹುಚ್ಚನಾಗಿದ್ದೆನು. ಕಂಡಕಂಡವರಿಗೆಲ್ಲಾ ಕೈಮುಗಿದು ನಿನ್ನನ್ನು ಪಡೆಯಲು ಸಿಕ್ಕಹಾಗೆ ಅಲ್ಪರಿದೆನು' ಎಂದು ರಾಜನು ಸುಖದುಃಖಗಳನ್ನು ತೋಡಿಕೊಂಡನು. ಅದನ್ನು ಕೇಳಿ ಉರ್ವಶಿಯು 'ನನ್ನ ಹಣೆಯಬರಹವು ಏನಾಯಿತೆಂಬದು ತಮ್ಮ

ಅಂತಃಕರಣಕ್ಕೆ ಗೊತ್ತಾಗಿಯೇ ಇದೆ. ಅದನ್ನೇ ನಾನೇಕೆ ಮತ್ತೆ ಹೇಳಲಿ ? ' ಎಂದು ಉತ್ತರಿಸಿದಳು.

ರಾಜನು ' ಪ್ರಿಯೇ, ನಿಜವಾಗಿ ಹೇಳಬೇಕೆಂದರೆ ಅಂತಃಕರಣವೆಂದರೆ ಏನಿದೆ ಎಂಬುದರ ಅರಿವೇ ನನಗೆ ಮೂಲತಃ ಗೊತ್ತಾಗಿರುವದಿಲ್ಲ ' ಎಂದು ಅನ್ನಲು, ವಿರಹದಿಂದ ಉನ್ಮತ್ತನಾದ ರಾಜನಿಗೆ ನಿಜವಾದ ವೃತ್ತಾಂತವೇನಿದೆ ಎಂಬದು ಗೊತ್ತಿಲ್ಲವೆಂದು ಬಗೆದು ಉರ್ವಶಿಯು ' ಕಾರ್ತಿಕಸ್ವಾಮಿಯು ಬ್ರಹ್ಮಚರ್ಯ ವ್ರತವನ್ನು ಸ್ವೀಕರಿಸಿ ಅಕಲುಷವೆಂಬ ಹೆಸರಿನ ಈ ಗಂಧ ಮಾದನ ಪರ್ವತ ಪ್ರದೇಶವನ್ನು ತನ್ನ ವಾಸಸ್ಥಾನವನ್ನು ಮಾಡಿಕೊಂಡು ಅದಕ್ಕೊಂದು ಮೇರೆಯನ್ನು ಗೊತ್ತುಪಡಿಸಿದನು ' ಎಂದು ಹೇಳಲಾಗಿ ರಾಜನು ' ಆ ಮೇರೆ ಎಂದರೇನು ? ' ಎಂದು ವಿಚಾರಿಸಿದನು. ಅದನ್ನು ಕೇಳಿ ಉರ್ವಶಿಯು ' ಎರಡನೆಯದಾವದೂ ಅಲ್ಲ. ಬ್ರಹ್ಮಚಾರಿಗೆ ವಿಘ್ನ ಮಾಡು ವವರೆಂದರೆ ಸ್ತ್ರೀಯರು. ಆದಕಾರಣ ಯಾವ ಸ್ತ್ರೀಯರು ಈ ಪ್ರದೇಶ ದೊಳಗೆ ಬರುವರೋ ಅಂಥವರು ಬಳ್ಳಿಯ ರೂಪವನ್ನು ಧರಿಸುವರೆಂದು ಮರ್ಯಾದೆಪಡಿಸಿದ್ದನು. ಒಂದುವೇಳೆ ಗೊತ್ತಿಲ್ಲದೆ ಯಾರಾದರೂ ಅಲ್ಲಿ ಪ್ರವೇಶ ಮಾಡಿದರೆ ಪಾರ್ವತಿಯ ಚರಣಕಮಲದ ಮಣ್ಣಿನಿಂದ ಉಂಟಾ ಗುವ ಸಂಗಮನೀಯ ಮಣಿಯ ಹೊರತಾಗಿ ಮೊದಲಿನ ರೂಪವು ಬರಲಾರ ದೆಂದು ಉಶ್ಶಾಪವನ್ನಿತ್ತನು. ನನಗೆ ಈ ರಹಸ್ಯವು ಗೊತ್ತಿದ್ದರೂ ಗುರುವಿನ ಶಾಪದಿಂದ ನನ್ನ ಹೃದಯವು ಹುಚ್ಚಾಗಿದ್ದುದರಿಂದ ಈ ಕಾರ್ತಿಕಸ್ವಾಮಿಯ ನಿಯಮವು ನನ್ನ ಸ್ಮರಣೆಯಲ್ಲಿ ಉಳಿಯಲಿಲ್ಲ. ನಾನು ಸಿಟ್ಟಿನ ಭರದಲ್ಲಿ ಒಮ್ಮೆಲೆ ಸ್ತ್ರೀಯರಿಗೆ ನಿರ್ಬಂಧಿತವಾದ ಈ ಕುಮಾರವನದಲ್ಲಿ ಧುಮುಕಿದೆನು. ಅದರಿಂದ ನನಗೆ ಈ ಬಳ್ಳಿಯ ವೇಷಾಂತರವಾಯಿತು ' ಎಂದಳು.

ರಾಜನು ' ನೀನು ಹೇಳಿದ ವರ್ತಮಾನವು ನಿಜವಿರುವ ಸಂಭವವಿದೆ. ಯಾಕೆಂದರೆ ಬಹಳ ಹೊತ್ತು ವಿಲಾಸವನ್ನನುಭವಿಸಿದ ನಂತರ ಒಂದೇ ಹಾಸಿ ಗೆಯ ಒಂದು ಬದಿಗೆ ಸರಿದು ನಿದ್ದೆಹೋಗಿದ್ದರೂ ಎಲ್ಲಿ ದೂರ ಪ್ರವಾಸಕ್ಕೆ ಹೋಗಿರಬೇಕೋ ಎಂದು ಚಿಂತಿಸುತ್ತಿದ್ದ ನೀನು, ನಾನಿಷ್ಟು ಹೊತ್ತಿನ ವರೆಗೆ ವಿರಹಾಗ್ನಿಯಿಂದ ಬೆಂದು ಬೇಗುದಿಗೊಂಡರೂ ನನ್ನ ವಿರಹತಾಪವನ್ನು ಹೇಗೆ ಸಹಿಸಿಕೊಂಡೆ ? ' ಎಂದಂದು ಆ ಮಣಿಯನ್ನು ಅವಳಿಗೆ ತೋರಿಸಿ

'ಸಂಗಮಮಣಿಯ ವಿಚಾರ ಹೇಳಿದೆಯಲ್ಲವೇ? ನೋಡು. ಅದೇ ಮಣಿಯೇ ಇದು. ಇದರ ಪ್ರಭಾವದಿಂದಲೇ ನಿನ್ನ ದರ್ಶನವಾಯಿತು' ಎಂದು ಹೇಳಿದನು.

ಉರ್ವಶಿಗೆ ಈ ಮಣಿಯ ಪರಿಚಯವು ಇತ್ತು. ಅದನ್ನು ನೋಡಿ ಉರ್ವಶಿಯು 'ಈ ಮಣಿಯು ತಮಗೆ ಹೇಗೆ ದೊರಕಿತು ? ನೀವು ಆ ಬಳ್ಳಿಯನ್ನು ಆಲಿಂಗಿಸಿಕೊಂಡದ್ದರಿಂದಲೇ ನನಗೆ ನನ್ನ ಮೊದಲಿನ ರೂಪವು ಬಂದಿತು' ಎಂದಳು.

ರಾಜನು ಆ ಸಂಗಮಮಣಿಯನ್ನು ಉರ್ವಶಿಯ ಲಲಾಟದಲ್ಲಿರಿಸಿ 'ನಿನ್ನ ಲಲಾಟವನ್ನಲಂಕರಿಸಿದ ಈ ಮಣಿಯಿಂದ ಸೂತ್ತಲೂ ಬೆಳಕು ಬಿದ್ದಿರುವದರಿಂದ ಇದೀಗ ಉದಯಿಸುತ್ತಿರುವ ಸೂರ್ಯನ ಕಿರಣಗಳು ಯಾವುದರ ಮೇಲೆ ಬಿದ್ದಿರುವವೋ ಅಂಥ ಕೆಂಪು ಕಮಲದಂತೆ ನಿನ್ನ ಮುಖವು ರಮಣೀಯವಾಗಿ ತೋರುತ್ತದೆ' ಎಂದನು.

ರಾಜನು ಉರ್ವಶಿಯನ್ನೊಡಗೊಂಡು ವಿಲಾಸಮಾಡುವದಕ್ಕೆಂದು ರಾಜಧಾನಿಯನ್ನು ಬಿಟ್ಟು ಬಂದು ಬಹಳ ದಿನಗಳಾಗಿದ್ದವು. ಇಲ್ಲಿ ಅನೇಕ ಪರಿಯಿಂದ ವಿಲಾಸಸುಖವನ್ನು ಭೋಗಿಸಿ ಉರ್ವಶಿಗೂ ಸಾಕಾಗಿ ಹೋಗಿತ್ತು. ಅಲ್ಪಕಾಲದ ಅಗಲಿಕೆಯ ಬಳಲಿಕೆಯಿಂದ ರಾಜನೂ ಬೇಸತ್ತು ಹೋಗಿದ್ದನು. ಇನ್ನು ಮುಂದೆ ರಾಜಧಾನಿಗೆ ಹೋಗಿ ವಿಶ್ರಾಂತಿಯನ್ನು ಪಡೆಯೋಣವೆಂದು ವಿಚಾರಮಾಡಿ ಉರ್ವಶಿಯು 'ಇಲ್ಲಿಯ ವಿಹಾರವು ಇನ್ನು ಸಾಕು. ರಾಜಧಾನಿಯನ್ನು ಬಿಟ್ಟುಬಂದು ಬಹಳೇ ದಿನಗಳಾದವು. ತಮ್ಮ ಆಪ್ತೇಷ್ಟವರ್ಗದವರೂ, ಸೇವಕರೂ ತಮಗೆ ಹುಚ್ಚರೆಂದು.ಅನ್ನದಿರಲಾರರು. ಕಾರಣ ನಾವಿನ್ನು ಅರಮನೆಗೆ ಹೋಗೋಣ' ಎಂದಳು.

ಉರ್ವಶಿಯ ನಾದದಲ್ಲಿ ಲೀನನಾದ ರಾಜನಿಗೆ ಇನ್ನೂ ಎಷ್ಟೋ ವರುಷಗಳು ಹೀಗೆಯೇ ಕಳೆದಿದ್ದರೂ ಅವನಿಗೆ ಮನೆಯ ಕಡೆಯ ನೆನಪೇ ಆಗುತ್ತಿರಲಿಲ್ಲ. ಆದರೆ ಉರ್ವಶಿಯು ಅದರ ನೆನಪು ಮಾಡಿ ಕೊಟ್ಟಳು. ತಾನೂ ಹೊರಡಲು ಸಿದ್ಧಳಾದಳು. ಆಗ ರಾಜನು ಅವಳ ಮಾತಿಗೊಪ್ಪಿ 'ನಡೆ, ಹೊರಡೋಣ' ವೆಂದಂದನು.

ಗಂಧಮಾದನವು ಪ್ರಯಾಗದಿಂದ ಬಲು ದೂರವಿದ್ದು ಕುದುರೆಯಾಗಲಿ, ರಥವಾಗಲಿ ಅಥವಾ ಇನ್ನಾವ ವಾಹನ ಸೌಕರ್ಯಗಳಾಗಲಿ ಆಗ ರಾಜನ ಸನ್ನಿಧಿಯಲ್ಲಿ ಇದ್ದಿದ್ದಿಲ್ಲ. ಆದ್ದರಿಂದ ಉರ್ವಶಿಯು 'ಮಹಾರಾಜರೇ, ರಾಜಧಾನಿಗೆ ಹೋಗುವ ಬಗೆ ಹೇಗೆ ?' ಎಂದು ವಿಚಾರಿಸಿದಳು.

ಆಗ ರಾಜನು 'ವಿದ್ಯುಲ್ಲತೆಯ ಪ್ರಕಾಶದಿಂದ ಯಾವುದು ಶೋಭಿಸುವದೋ, ಇಂದ್ರಧನುಸ್ಸಿನ ಯೋಗದಿಂದ ಚಿತ್ರವಿಚಿತ್ರ ಪತಾಕೆಗಳನ್ನು ಹಚ್ಚಿದ ವಿಮಾನದಂತೆ ಯಾವುದು ಕಾಣುವದೋ ಅಂಥ ಮೇಘನ ಮೇಲೆ ಕುಳಿತು ನನ್ನನ್ನು ಮನೆಗೆ ಕರೆದುಕೊಂಡು ಹೋಗು. ಯಾವನಿಗೆ ಸಹಚರಿಯ ಸಮಾಗಮವಾಗಿದೆಯೋ, ಯಾವನ ಮೈಯಲ್ಲಿ ರೋಮಾಂಚನಗಳೆದ್ದಿರುವವೋ ಯಾವನಿಗೆ ಸ್ವೇಚ್ಛೆಯಿಂದ ವಿಮಾನವು ಪ್ರಾಪ್ತವಾಗಿದೆಯೋ ಅಂಥ ತರುಣ ಹಂಸವು ಪ್ರಿಯೆಯನ್ನು ಕೂಡಿಕೊಂಡು ಮನಬಂದಂತೆ ವಿಹಾರ ಮಾಡುತ್ತದೆ' ಎಂದನು.

ಪುರೂರವ ರಾಜನು ಇಂದ್ರನ ಪ್ರಿಯಮಿತ್ರನಾಗಿದ್ದನೆಂಬದನ್ನು ಹೇಳುವದೇ ಬೇಡ. ಅವನು ಈ ಹೊತ್ತಿಗೆ ತನ್ನ ಮನೆಗೆ ಹೊರಡಲು ಸಿದ್ಧನಾಗಿರುವಾಗ ಅವನ ಹತ್ತಿರ ಯಾವ ವಾಹನಗಳೂ ಇಲ್ಲದಿರುವದನ್ನು ಇಂದ್ರನು ಅಂತರ್ಜ್ಞಾನದಿಂದ ತಿಳಿದು ಆ ಕ್ಷಣಕ್ಕೆ ಅವನಿಗೊಂದು ವಿಮಾನವನ್ನು ಕಳುಹಿದನು. ಅಕಸ್ಮಾತ್ತಾಗಿ ವಿಮಾನ ಬಂದುದನ್ನು ನೋಡಿ ಆನಂದಿತನಾದ ರಾಜನು ತನ್ನ ಪ್ರಿಯಕರಳಾದ ಉರ್ವಶಿ ಸಹಿತವಾಗಿ ಆ ವಿಮಾನದಲ್ಲಿ ತನ್ನ ರಾಜಧಾನಿಗೆ ಪ್ರಯಾಣ ಬೆಳಸಿದನು. ಹೀಗೆ ರಸಿಕಶಿಖಾಮಣಿಯಾದ ರಾಜನು ಬಹಳ ದಿನಗಳ ವರೆಗೆ ವನಕ್ರೀಡೆಯನ್ನು ಮಾಡಿ, ಸುಖವನ್ನು ಭೋಗಿಸುವದರ ಜೊತೆಗೆ ಅನೇಕ ದುಃಖಾನುಭವವನ್ನು ಹೊಂದಿ, ಪುನಃ ಹರುಷಾನ್ವಿತನಾಗಿ ಒಮ್ಮೆ ಅರಮನೆಗೆ ಬಂದು ಬಿಟ್ಟನು.

ಈಗ ಪುರೂರವ ರಾಜನು ಯುದ್ಧಕ್ಕೆ ಹೋಗಿ ವಿಜಯಶ್ರೀಯನ್ನು ವರಿಸಿ ಬಂದಿರಲಿಲ್ಲ. ಅವನು ಅಪ್ಸರೆಯೊಬ್ಬಳ ಬಲೆಗೆ ಸಿಲುಕಿ, ಮನಸ್ಸಿಗೆ ಬಂದಂತೆ ವಿಹಾರ ಮಾಡಲು ಹೋಗಿದ್ದನು. ಆದಕಾರಣ ಪ್ರಜರು ಅವನಿಗೆ ಸನ್ಮಾನ ಮಾಡಿ, ಅವನ ಆಗಮನಾರ್ಥವಾಗಿ ಉತ್ಸವಗಳನ್ನು ಮಾಡಬೇಕೆಂಬ ಸಂದರ್ಭವೇನೂ ಇರಲಿಲ್ಲ. ಆದರೂ ಅವನ ಅಪ್ರತಿಮ ಗುಣಗಳಿಗೆ ಮೆಚ್ಚಿದ

ಪ್ರಜರು ಅವನಿಗೆ ತಮ್ಮ ಗೌರವಾದರಗಳನ್ನು ತೋರಿಸಿ, ಸುರಕ್ಷಿತವಾಗಿ ಬಂದುದಕ್ಕೆ ತಮ್ಮ ಆನಂದವನ್ನು ಪ್ರದರ್ಶಿಸದೇ ಬಿಡಲಿಲ್ಲ.

---

೫

ಉರ್ವಶಿಯು ಅಧರಾಮೃತದ ಪ್ರಾಶನವನ್ನು ಮಾಡುತ್ತ ಸರ್ವಕಾಲ ವನ್ನು ಕಳೆಯಬೇಕೆಂದು ರಾಜನ ಮನೀಷೆಯಾಗಿತ್ತು. ಆದರಿಂದ ಅವನ ಲಕ್ಷ್ಯವು ರಾಜ್ಯಕಾರಭಾರದಲ್ಲಿ ನೆಲೆಸದಂತಾಗಿತ್ತು. ಆದರೆ ಈ ಹೊತ್ತಿಗೆ ಅವನ ಮನವು ಸ್ಥಿರತೆಯನ್ನು ಪಡೆದಿತ್ತು. ವಿಷಯೋಪಭೋಗದ ಅತಿರೇಕ ದಿಂದ ತೃಪ್ತನಾದ ರಾಜನು ಈಗ ರಾಜ್ಯಕಾರಭಾರದ ಕಡೆಗೆ ಮನಸು ಹಾಕ ತೊಡಗಿದನು. ಉರ್ವಶಿಯೂ ಅವನ ರಾಜಗೃಹದಲ್ಲಿ ವಿವಾಹಿತ ಸ್ತ್ರೀಯಂತೆ ಆನಂದದಿಂದ ಇರತೊಡಗಿದಳು.

ವಸುಮತಿಯು ಪಟ್ಟದ ರಾಣಿಯಾಗಿದ್ದರೂ ರಾಜನ ಪ್ರೇಮವು ಉರ್ವಶಿಯಲ್ಲಿ ವಿಶೇಷವಾಗಿದ್ದುದರಿಂದಲೂ ಪ್ರತಿಯೊಂದು ಕಾರ್ಯ ದಲ್ಲಿಯೂ ಮುಂದಾಗಿ ಬರುತ್ತಿದ್ದುದರಿಂದಲೂ ಅವಳೇ ಪಟ್ಟದ ರಾಣಿಯಾ ಗಿದ್ದಳೆಂದು ಹೇಳಿದರೆ ತಪ್ಪಾಗದು. ಪಾಪ! ವಸುಮತಿಯು ಹೆಸರಿಗೆ ಮಾತ್ರ ಒಡತಿಯಾಗಿದ್ದಳು. ಉರ್ವಶಿಗೆ ಕುಲವಧುವಿನ ಸ್ವರೂಪ ಪ್ರಾಪ್ತ ವಾಗಿದ್ದರೂ ಅವಳ ಜಾತಿಸ್ವಭಾವವೇನು ಬದಲಾಗಿರಲಿಲ್ಲ. ರಾಜನಿಗೆ ಪುತ್ರ ಮುಖದರ್ಶನವಾಗುವ ವರೆಗೆ ಮಾತ್ರ ಅವಳು ಅವನ ಹತ್ತಿರವಿರಬೇಕೆಂದು ಉರ್ವಶಿಗೆ ಇಂದ್ರನ ಆಜ್ಞೆಯಾಗಿದ್ದಿತಷ್ಟೇ. ಆದರಿಂದ ಅವಳಿಗೆ ದೊಡ್ಡ ದೊಂದು ಚಿಂತೆಯೇ ಇತ್ತು. ಸಾಮಾನ್ಯವಾಗಿ ವೇಶ್ಯೆಯರಿಗೆ ಮಕ್ಕಳಾಗು ವದು ಸೇರುವದೇ ಇಲ್ಲ. ಒಂದು ವೇಳೆ ಸಂತಾನವಾದರೂ ಇಳಿವಯಸ್ಸಿನಲ್ಲಿ ಆಗಬೇಕೆಂಬಿಚ್ಛೆ ಇರುತ್ತದೆ. ಅದರಲ್ಲಂತೂ ಇಂದ್ರನ ಆಜ್ಞೆಯೊಂದು ಇದ್ದುದ ರಿಂದ ಉರ್ವಶಿಯು ಸಂತಾನವಾಗುವ ಪ್ರಸಂಗ ಬರಬಾರದೆಂದು ದೇವರಿಗೆ ಹರಕೆಯನ್ನು ಹೊತ್ತಿದ್ದಳು. ಆದರೂ ಅವಳ ಹರಕೆ ಸಫಲವಾಗದೆಹೋಗುವ ಪ್ರಸಂಗ ತಪ್ಪಲಿಲ್ಲ.

ರಾಜನಿಂದ ತನ್ನಲ್ಲಿ ಗರ್ಭಧಾರಣವಾಯಿತೆಂಬ ಮಾತು ಚತುರಬುದ್ಧಿಯಾದ ಅವಳಿಗೆ ತತ್ಕಾಲಕ್ಕೆ ತಿಳಿದುಬಿಟ್ಟಿತು. ಮಾನವ ಸ್ತ್ರೀಯರಂತೆ ಒಂಬತ್ತು ತಿಂಗಳುಗಳ ವರೆಗೆ ಗರ್ಭವನ್ನು ಧರಿಸಿ, ಆಮೇಲೆ ಪ್ರಸೂತವಾಗಬೇಕೆಂಬ ನಿಯಮವೇನು ಈ ದಿವ್ಯ ಸ್ತ್ರೀಯರಿಗೆ ಅನ್ವಯಿಸುವದಿಲ್ಲ. ಅವಳು ದೇವಲೋಕವಾಸಿಯಾದ್ದರಿಂದ ಗರ್ಭಧಾರಣವಾದ ಕೂಡಲೆ ಪ್ರಸೂತಿಯಾಗತಕ್ಕದ್ದಿರುವದರಿಂದ ರಾಜನ ವಿರಹವುಂಟಾಗಬಾರದೆಂಬ ಇಚ್ಛಿಸುವ ಉರ್ವಶಿಯು ಅವನಿಗೆ ಗೊತ್ತಾಗದಂತೆ ಚ್ಯವನಋಷಿಯ ಆಶ್ರಮಕ್ಕೆ ಹೋಗಿ ಅಲ್ಲಿ ಪ್ರಸೂತಳಾದಳು. ಅವಳು ತನ್ನ ಮಗನನ್ನು ಆ ಆಶ್ರಮದಲ್ಲಿರುವ ಸತ್ಯವತಿ ಎಂಬ ತಾಪಸಿಯ ಸ್ವಾಧೀನಪಡಿಸಿ ರಾಜನ ಬಳಿಗೆ ತಿರುಗಿ ಬಂದಳು.

ರಾಜನಿಗೆ ಇದೆಲ್ಲ ಸಂಗತಿಯ ಗಂಧವೂ ಇರಲಿಲ್ಲ. ಇಷ್ಟೇ ಅಲ್ಲದೆ ಅವಳು ಗರ್ಭಿಣಿಯಾಗಿರುವಳೆಂಬ ಮಾತೂ ಅವನ ಲಕ್ಷ್ಯದಲ್ಲಿ ಬಂದಿರಲೇ ಇಲ್ಲ. ಸಕಲ ಸಂಪತ್ತುಗಳಿದ್ದರೂ ಇನ್ನೂವರೆಗೆ ತನಗೆ ಸಂತಾನವಾಗಲಿಲ್ಲ ಎಂಬ ಕೊರತೆಯಿಂದ ಅವನ ಮನಸು ಮಾತ್ರ ವಿಚಾರಮಾಡದೆ ಹೋಗಿದ್ದಿಲ್ಲ.

ಒಂದು ದಿವಸ ಯಾವುದೋ ಪರ್ವಣಿಯ ಯೋಗವಿತ್ತೆಂದು ರಾಜನು ಅಂದು ರಾಣಿಯರನ್ನೊಡಗೊಂಡು ಗಂಗಾ ಯಮುನಾ ಸಂಗಮದಲ್ಲಿ ಸ್ನಾನ ಮಾಡಬೇಕೆಂದು ಹೋಗಿದ್ದನು. ಅಲ್ಲಿ ಸ್ನಾನಮಾಡಿ, ಅನೇಕ ದಾನಧರ್ಮಾದಿಗಳನ್ನು ಕೊಟ್ಟು ರಾಜಗೃಹಕ್ಕೆ ತಿರುಗಿಬಂದು ಮೊಗಸಾಲೆಯಲ್ಲಿ ಅಲಂಕಾರವನ್ನು ಧರಿಸುತ್ತ ಕುಳಿತಿರುವಷ್ಟರಲ್ಲಿ ರಾಜನ ಪರಮ ಮಿತ್ರನಾದ ಮಾಣವಕನು ದರ್ಶನಾರ್ಥಿಯಾಗಿ ಅಲ್ಲಿ ಪ್ರವೇಶಿಸಿದನು.

'ನನ್ನ ಪ್ರಿಯ ಮಿತ್ರನು ಉರ್ವಶಿಯನ್ನು ಕೂಡಿಕೊಂಡು ದೇವತೆಗಳು ವಿಹರಿಸುವ ಸ್ಥಾನದಲ್ಲಿ ಯಥೇಷ್ಟವಾಗಿ ವಿಹರಿಸಿ ತಿರುಗಿ ಬಂದು ಸದ್ಯಕ್ಕೆ ರಾಜ್ಯಕಾರಭಾರದಲ್ಲಿ ಮನಸು ಹಾಕಿದ್ದಾನೆ. ಇಷ್ಟು ದಿನಗಳವರೆಗೆ ಅವನ ಅಗಲುವಿಕೆಯಿಂದ ದುಃಖಿತರಾದ ಪ್ರಜೆರನ್ನು ರಾಜನು ಈಗ ರಂಜಿಸುತ್ತಿದ್ದಾನೆ. ಹೊಟ್ಟೆಯಲ್ಲಿ ಮಕ್ಕಳಾಗಲಿಲ್ಲೆಂಬ ಚಿಂತೆಯೊಂದನ್ನು ಬಿಟ್ಟರೆ ಅವನಿಗೆ ಇನ್ನಾವ ಚಿಂತೆಯೂ ಇಲ್ಲ. ಪರ್ವಣಿಯ ನಿಮಿತ್ತದಿಂದ ಸಂಗಮಕ್ಕೆ ಹೋಗಿ ಸ್ನಾನಮಾಡಿಕೊಂಡು ಈಗ ತಾನೆ ಅಲಂಕಾರಗಳನ್ನು ಧರಿಸಿಕೊಳ್ಳಬೇಕೆಂದು ಕುಳಿತುಕೊಂಡಿದ್ದಾನೆ. ಆದರೆ ಅವನ ದೇಹಕ್ಕೆ ತೊಡೆಯಲಿರುವ ಚಂದನದ

ಗಂಧದಲ್ಲಿ ಬಂಧುವಿನಂತೆ ಪಾಲನ್ನು ತೆಗೆದುಕೊಳ್ಳಲು ನಾನೂ ಅವನ ಹತ್ತಿರ ಹೋಗಬೇಕು ' ಎಂದು ತನ್ನಲ್ಲಿಯೇ ವಿಚಾರ ಮಾಡಿಕೊಳ್ಳುತ್ತ ಮಾಣವಕನು ರಾಜನ ಹತ್ತಿರಕ್ಕೆ ಬಂದನು.

ಅಷ್ಟರಲ್ಲಿ ಯಾವುದೋ ಒಂದು ಪಕ್ಷಿಯು ಎರಗಿ ಒಂದು ರತ್ನವನ್ನು ಚುಂಚಿನಿಂದ ಕಚ್ಚಿಕೊಂಡು ಹಾರಿಹೋಯಿತೆಂಬ ಗೊಂದಲವೆದ್ದುಬಿಟ್ಟಿತು. ಊರ್ವಶಿಯ ಸಮಾಗಮವನ್ನು ಮಾಡಿಸಲು ಕಾರಣವಾಗಿದ್ದ ಆ ಮಣಿಯನ್ನು ರಾಜನು ಯಾವಾಗಲೂ ತನ್ನ ತಲೆಯಲ್ಲಿ ಧರಿಸಿಕೊಳ್ಳುತ್ತಿದ್ದನು. ಅವನು ಅಲಂಕರಿಸಿಕೊಳ್ಳುತ್ತಿದ್ದಾಗ ಅಲಂಕಾರಗಳೆಲ್ಲವೂ ಸಮೀಪದಲ್ಲಿಯೇ ಇಡಲ್ಪಟ್ಟಿದ್ದವು. ಅಲಂಕಾರ ಮಾಡುವ ಸೇವಕ ಜನರು ಒಂದೊಂದು ಅಲಂಕಾರವನ್ನು ತೆಗೆದುಕೊಂಡು ಅವನಿಗೆ ತೊಡಿಸುತ್ತಿದ್ದರು. ಆಗ ಆ ಸಂಗಮನೀಯ ಮಣಿಯೂ ಆ ಅಲಂಕಾರ ಸಮೂಹದಲ್ಲಿತ್ತು. ಇನ್ನೂ ರಾಜನು ಅದನ್ನು ಧರಿಸಿಕೊಂಡಿರಲಿಲ್ಲ.

ಅಷ್ಟರಲ್ಲಿ ಪಕ್ಷಿಯ ಕಣ್ಣಿಗೆ ಅದರ ಕೆಂಪು ಪ್ರಕಾಶವು ಬಿದ್ದಿತು. ಅದು ಮಾಂಸದ ತುಂಡು ಇರಬೇಕೆಂದು ಆ ಪಕ್ಷಿಯು ಅದರ ಮೇಲೆ ಎರಗಿತು. ಅದನ್ನು ಕಚ್ಚಿಕೊಂಡು ಆಕಾಶದಲ್ಲಿ ಹಾರಿಯೂ ಹೋಯಿತು. ಎಲ್ಲ ಸೇವಕ ಜನರು 'ಮಣಿಯು ಹೋಯಿತು, ಮಣಿಯು ಹೋಯಿತು' ಎಂದು ಚೀರಾಡತೊಡಗಿದ್ದರಿಂದ ಗೊಂದಲವೆದ್ದಿತು. ಅದನ್ನು ಕೇಳಿ ಮಾಣವಕನು 'ಓಹೋ ! ಬಹಳ ಕೆಡುಕಾಯಿತು. ಆ ಸಂಗಮನೀಯ ಮಣಿಯು ರಾಜನಿಗೆ ಅತ್ಯಂತ ಬೇಕಾದ ವಸ್ತುವಾಗಿತ್ತು ' ಎಂದಂದನು.

ಮಣಿಯು ಹೋಯಿತೆಂಬದನ್ನು ಕಂಡ ರಾಜನು ಅಲಂಕರಣವು ಪೂರ್ತಿಯಾಗಿರದಿದ್ದರೂ ಒಮ್ಮೆಲೆ ಆ ಪಕ್ಷಿಯ ಬೆನ್ನುಹತ್ತಿದನು. ವೇಧಕನೆಂಬ ಹೆಸರಿನ ಸೇವಕನೊಬ್ಬನು ಯಾವಾಗಲೂ ರಾಜನ ಸಮ್ಮುಖದಲ್ಲಿಯೇ ಇರುತ್ತಿದ್ದನು. ಅವನು ರಾಜನ ಅಂಗರಕ್ಷಕನಾಗಿದ್ದನು. ರಾಜನು 'ವೇಧಕಾ, ತಾನೇ ಬಂದು ಮೃತ್ಯುಮುಖದಲ್ಲಿ ಬೀಳುವಂಥ ಆ ಪಕ್ಷಿಯೆಲ್ಲಿರುವದು ? ಅದೆಂಥ ದುಷ್ಟ ಪಕ್ಷಿಯು ! ನನ್ನ ಪ್ರಿಯವಾದ ಮಣಿಯನ್ನು ಒಯ್ದುಬಿಟ್ಟಿತಲ್ಲ ! ' ಎಂದನು.

'ಮಹಾರಾಜರೇ—ನೋಡಿರಿ, ನೋಡಿರಿ. ಆ ಮಣಿಯ ರೇಶಿಮೆ ಪಾರವು ಆಕಾಶದಲ್ಲಿ ಹಾರಾಡುತ್ತಿದೆ! ಆ ಮಣಿಯ ಪ್ರಕಾಶದಿಂದ ಆಕಾಶವೇ ತೇಜಃಪುಂಜವಾಗಿದೆ. ಅಂಥ ಮಣಿಯನ್ನು ಕಚ್ಚಿಕೊಂಡು ಆ ಪಕ್ಷಿಯು ಅತ್ತಿತ್ತ ಹಾರಾಡುತ್ತಲಿದೆ!'

'ನಾನೀಗ ಅದರ ಸಮಾಚಾರವನ್ನು ತೆಗೆದುಕೊಳ್ಳುತ್ತೇನೆ. ಚುಂಚುಪಿಸಲ್ಲಿ ಆ ಮಣಿಯನ್ನು ಕಚ್ಚಿ ಮಂಡಲಾಕಾರವಾಗಿ ಆ ಪಕ್ಷಿಯು ತಿರುಗುತ್ತಿರುವದರಿಂದ ಆ ಮಣಿಯು ಅಲಾತಚಕ್ರದಂತೆ ಭಾಸವಾಗುತ್ತಿದೆ. ಏನು ಮಾಡಬೇಕು?'

ಮಾಣವಕನು 'ಇಂಥ ಪ್ರಸಂಗದಲ್ಲಿ ದಯೆಯನ್ನು ತೋರಿಸುವದರಲ್ಲಿ ಅರ್ಥವೇನಿದೆ? ಆ ಪಕ್ಷಿಯು ಅಪರಾಧವನ್ನು ಮಾಡಿದೆ. ಆದಕಾರಣ ಅದಕ್ಕೆ ಶಿಕ್ಷೆಯಾಗುವದೇ ಯೋಗ್ಯವು' ಎಂದನು.

ಆ ಬಡಪಕ್ಷಿಯ ಮೇಲೆ ಬಾಣಪ್ರಯೋಗ ಮಾಡುವದು ರಾಜನ ಮನಸಿಗೆ ಸರಿದೋರಲಿಲ್ಲ. ಆದರೆ ಮಾಣವಕನಾಡಿದ ಮಾತುಗಳನ್ನು ಕೇಳಿ 'ಒಳ್ಳೇ ಸೂಚನೆಯನ್ನು ಮಾಡಿದೆ. ಅದನ್ನು ಹೊಡೆಯುವದೇ ಯೋಗ್ಯವು' ಎಂದು ಸೇವಕನಿಗೆ 'ಧನುಷ್ಯವನ್ನು ಕೊಡು' ಎಂದು ಆಜ್ಞೆ ಮಾಡಿದನು.

ಆ ಸೇವಕನು ಧನುಷ್ಯವನ್ನು ತಂದು ರಾಜನ ಕೈಯಲ್ಲಿ ಕೊಟ್ಟನು. ರಾಜನು ಬಾಣವನ್ನು ಬಿಡಬೇಕೆನ್ನುವಷ್ಟರಲ್ಲಿಯೇ ಆ ಪಕ್ಷಿಯು ದೂರ ಹಾರಿ ಹೋದುದರಿಂದ ಅದು ಕಣ್ಣಿಗೆ ಕಾಣಿಸದಾಯಿತು. ಆಗ ರಾಜನು 'ಆ ಹಕ್ಕಿಯು ಕಾಣಿಸುವದಿಲ್ಲವಲ್ಲ! ಏನು ಮಾಡುವದು' ಎಂದು ನಿರಾಶೆಯ ಉದ್ಗಾರ ತೆಗೆದನು.

ಮಾಣವಕನು 'ಅದೋ ಆ ಪಕ್ಷಿಯು ದಕ್ಷಿಣದ ಕಡೆಗೆ ಹಾರಿ ಹೋಯಿತು. ನೋಡು—ಅಲ್ಲಿ ಕಾಣುತ್ತಿದೆ' ಎಂದು ಹೇಳಿದನು.

'ಸುತ್ತಲೂ ಹರಡಿರುವ ಈ ಮಣಿಯ ಕಾಂತಿಯಿಂದ ಈ ದಕ್ಷಿಣ ದಿಶೆಯ ಮುಖಕ್ಕೆ ಕೆಂಪು ತುರಾಯಿಯನ್ನು ಹಚ್ಚಿದಂತೆ ಕಾಣುತ್ತಿದೆ. ಈ ಧನುಷ್ಯವನ್ನು ತೆಗೆದುಕೊಂಡು ಮಾಡುವದೇನಿದೆ? ಅದು ಬಾಣದ ಆಳವನ್ನು ಮೀರಿ ಹೋಗಿದೆ. ಆ ಪಕ್ಷಿಯು ದೂರ ತೆಗೆದುಕೊಂಡು ಹೋದ ಮಣಿಯು ಮೇಘಮಂಡಲವನ್ನು ಭೇದಿಸಿ ಸಾಯಂಕಾಲ ಉದಯವಾಗಿರುವ ಮಂಗಳ ಗೃಹದಂತೆ ತೋರುತ್ತದೆ.'

ಈ ಪ್ರಕಾರವಾಗಿ ಸಂಗಮನೀಯ ಮಣಿಯು ಕೈಯಿಂದ ಜಾರಿ ಹೋಮದನ್ನು ಕಂಡು ರಾಜನು ಚೋಪದಾರನಾದ ಲಾತವ್ಯನನ್ನು ಕರೆದು 'ನನ್ನ ಆಜ್ಞೆಯನ್ನು ಸಮಸ್ತ ಜನರಿಗೂ ತಿಳಿಸು. ಏನೆಂದರೆ— ಈಗ ಸಂಧ್ಯಾ ಕಾಲವಾಗುವ ಹೊತ್ತಾಗಿದೆ. ಆದ್ದರಿಂದ ಆ ಪಕ್ಷಿಯು ಎಲ್ಲಿಯಾದರೂ ಯಾವುದಾದರೊಂದು ಗಿಡದ ಮೇಲೆ ಕುಳಿತುಕೊಳ್ಳುವದು. ಆಗ ಅದರ ಬಾಯಲ್ಲಿರುವ ಮಣಿಯು ಕೆಳಗೆ ಬೀಳುವದು. ಆದಕಾರಣ ಎಲ್ಲರೂ ಅದರ ಕಡೆಗೆ ಲಕ್ಷ್ಯಕೊಟ್ಟು, ಯಾರಿಗಾದರೂ ಅದು ದೊರೆತರೆ ಅದನ್ನು ತಂದು ಕೊಡಬೇಕು ' ಎಂದು ರಾಜನು ಆಜ್ಞೆಯನ್ನು ವಿಧಿಸಿದನು.

'ಆಜ್ಞೆಯಂತೆ ಮಾಡುವೆನು' ಎಂದು ಆ ಚೋಪದಾರನು ಅಲ್ಲಿಂದ ಕಾಲ್ತೆಗೆದನು. ಮಣಿಯು ಕೈಬಿಟ್ಟು ಹೋದುದರಿಂದ ರಾಜನ ಮನಸ್ಸು ಅಸ್ವಸ್ಥವಾಗಿರುವದನ್ನು ಕಂಡು ಮಾಣವಕನು 'ಗೆಳೆಯಾ, ನೀನು ಈಗ ವಿಶ್ರಾಂತಿಯನ್ನು ತೆಗೆದುಕೋ. ಆ ಮಣಿಯ ಕಳ್ಳನು ಹೋಗುವದಾದರೂ ಎಲ್ಲಿಗೆ? ನಿನ್ನ ಶಿಕ್ಷೆಗೆ ಪಾತ್ರವಾಗದೆ ಅದು ಹೇಗೆ ಮುಕ್ತವಾದೀತು ?' ಎಂದನು.

ರಾಜನು 'ಆ ಮಣಿಯಲ್ಲಿ ನನ್ನ ಮನಸ್ಸು ನಟ್ಟುಹೋಗಿತ್ತು. ಅದೊಂದು ಉತ್ತಮ ಮಣಿಯಾಗಿತ್ತು. ಅಲ್ಲದೆ ಯಾವ ಮಣಿಯ ಯೋಗದಿಂದ ನನಗೆ ಉರ್ವಶಿಯ ಸಮಾಗಮವಾಯಿತೋ ಅಂಥ ಮಣಿಯು ಅದಾಗಿದೆ. ಆದ್ದರಿಂದ ಅದರ ಅಗತ್ಯವೂ ಅವಶ್ಯಕತೆಯೂ ನನಗಿದೆ' ಎಂದು ಹೇಳಿದನು.

ಉರ್ವಶಿಯು ಪ್ರಸೂತಳಾಗಿ ತನ್ನ ಮಗನನ್ನು ತಾಪಸಿಯೊಬ್ಬಳ ಸ್ವಾಧೀನಪಡಿಸಿ ಬಂದ ಚ್ಯವನ ಋಷಿಯ ಆಶ್ರಮವು ಪ್ರತಿಷ್ಠಾನ ಪಟ್ಟಣದ ಸಮೀಪದಲ್ಲಿಯೇ ಇತ್ತು. ಆ ತಾಪಸಿಯಾದ ಸತ್ಯವತಿಯು ಆ ಹುಡುಗನ ಲಾಲನೆ ಪಾಲನೆ ಮಾಡಿ ಅವನನ್ನು ದೊಡ್ಡವನನ್ನಾಗಿ ಮಾಡಿದ್ದಳು. ಈ ಹೊತ್ತಿಗೆ ಆ ಹುಡುಗನಿಗೆ ೧೨ ವರುಷಗಳಾಗಿದ್ದವು. ಕ್ಷತ್ರಿಯ ಧರ್ಮಕ್ಕೆ ಉಚಿತವಾದ ಎಲ್ಲ ಸಂಸ್ಕಾರಗಳನ್ನು ಚ್ಯವನ ಋಷಿಯು ಅವನಿಗೆ ಮಾಡಿಸಿ, ಅವನಿಗೆ ಧನುರ್ವಿದ್ಯೆಯ ಅಭ್ಯಾಸವನ್ನೂ ಮಾಡಿಸಿದ್ದನು.

ಚ್ಯವನ ಋಷಿಯ ಆಶ್ರಮವೆಂದರೆ ಶಾಂತತೆಯ ತವರೂರೇ ಆಗಿತ್ತು. ಪ್ರಾಣಿಮಾತ್ರಗಳು ಪರಸ್ಪರರಲ್ಲಿದ್ದ ವೈರಭಾವವನ್ನು ಬಿಟ್ಟು, ಮೈತ್ರಿಯಿಂದ

ವಾಸಿಸುತ್ತಿದ್ದವು. ಇಂಥ ಆಶ್ರಮದಲ್ಲಿ ನಮ್ಮ ರಾಜನ ಮಗನಾದ ಆಯು ರಾಜಪುತ್ರನು ಋಷಿಕುಮಾರರೊಂದಿಗೆ ಕಂದಮೂಲಗಳನ್ನು ತಿಂದು ಚಕ್ಕಂದದಿಂದಿರುತ್ತಿದ್ದನು. ಆದರೂ ಅವನಲ್ಲಿರುವ ಕ್ಷಾತ್ರತೇಜವೇನು ಅಡ ಗಿರಲಿಲ್ಲ. ಯಾರ ಯಾರ ಸ್ವಭಾವಗುಣಗಳು ಹೇಗೆ ಹೇಗೆ ಇರುವವೋ ಅಂಥ ಅಂಥ ಗುಣಗಳು ಪ್ರಸಂಗೋಚಿತವಾಗಿ ಪ್ರಕಟವಾಗದೆ ಎಂದೂ ಉಳಿಯುವದಿಲ್ಲ.

ಪುರೂರವನ ಸಂಗಮನೀಯ ಮಣಿಯನ್ನು ಕಚ್ಚಿಕೊಂಡು ಹಾರಿ ಹೋದ ಪಕ್ಷಿಯು ಸಂಧ್ಯಾಕಾಲವಾಗುತ್ತಲೆ ಚ್ಯವನ ಋಷಿಯ ಆಶ್ರಮ ದೊಳಗಿರುವ ಒಂದು ಗಿಡದ ಮೇಲೆ ಬಂದು ಕುಳಿತಿತು. ಮಣಿಯ ಬೆಳಕು ಸುತ್ತಲೂ ಹರಡಿರುವದನ್ನು ಕಂಡು ಆಯು ರಾಜಪುತ್ರನಲ್ಲಿ ಕ್ಷಾತ್ರತೇಜವು ಪ್ರಕಟವಾಯಿತು. ಅವನು ಕೈಯಲ್ಲಿ ಧನುರ್ಬಾಣಗಳನ್ನು ತೆಗೆದುಕೊಂಡು ಅದರ ಕಡೆಗೆ ಗುರಿಯಿಟ್ಟು ಹೊಡೆದನು. ಅದರಿಂದ ಆ ಪಕ್ಷಿಯು ಆ ಮಣಿ ಸಹಿತವಾಗಿ ಕೆಳಗೆ ಕಡಕೊಂಡು ಬಿದ್ದಿತು.

ರಾಜನ ಆಜ್ಞೆಯು ಎಲ್ಲರ ಕಿವಿಗೂ ಹೋಗಿ ಮುಟ್ಟಿತ್ತು. ಆದಕಾರಣ ಆ ಮಾರ್ಗದಿಂದ ಹೋಗುತ್ತಿರುವ ಮನುಷ್ಯನೊಬ್ಬನು ಆ ಬಾಣವನ್ನೂ ಆ ಪಕ್ಷಿಯನ್ನೂ ತೆಗೆದುಕೊಂಡು ರಾಜಗೃಹದ ಕಡೆಗೆ ಬಂದು ಚೋಪದಾರನ ಸ್ವಾಧೀನಪಡಿಸಿದನು. ಆ ಚೋಪದಾರನು ಅತ್ಯಾನಂದದಿಂದ ಆ ಪಕ್ಷಿಯನ್ನು ತೆಗೆದುಕೊಂಡು ರಾಜನ ಬಳಿಗೆ ಬಂದು ನಮಸ್ಕರಿಸಿ ' ಮಹಾರಾಜರಿಗೆ ಜಯ ಜಯಕಾರವಿರಲಿ ! ಯಾರೋ ಒಬ್ಬರು ಈ ಪಕ್ಷಿಯನ್ನು ತಂದುಕೊಟ್ಟರು. ಅದರ ಮೈಯಲ್ಲಿ ಬಾಣವು ನಟ್ಟಿದೆ. ಮಹಾರಾಜರ ಕೋಪವೇ ಬಾಣವಾಗಿ ಪರಿಣಮಿಸಿ ಅದರ ದೇಹವನ್ನು ನಾಶಪಡಿಸಿದ್ದರಿಂದ ಅದಕ್ಕೆ ತಕ್ಕ ಶಿಕ್ಷೆಯೇ ಆಗಿ, ಆ ಪಕ್ಷಿಯು ಮಣಿ ಸಹಿತವಾಗಿ ಆಕಾಶದಿಂದ ಭೂಮಿಯ ಮೇಲೆ ಬಿದ್ದಿರುತ್ತದೆಂದು ಭಾಸವಾಗುತ್ತಿದೆ ' ಎಂದು ಬಿನ್ನಹ ಮಾಡಿಕೊಂಡನು.

ಯಾರ ಬಾಣದ ಹೊಡೆತದಿಂದ ಈ ಪಕ್ಷಿಯು ಭೂಮಿಗೆ ಬಿದ್ದಿತ್ತೆಂಬದು ಎಲ್ಲರಿಗೂ ಆಶ್ಚರ್ಯಕರವಾದ ಸಂಗತಿಯೆನಿಸಿತು. ಚೋಪದಾರನು ಆ ಮಣಿ ಯನ್ನು ತೊಳೆದು ಒರೆಸಿ ತಂದು ' ಇದನ್ನು ಯಾರ ಕಡೆಗೆ ಕೊಡಬೇಕು ' ಎಂದು ವಿಚಾರಿಸಿದನು. ರಾಜನು ಅದನ್ನು ಕೇಳಿ ಅಲಂಕಾರಗಳ ಪೆಟ್ಟಿಗೆಯಲ್ಲಿ

ಇಡಲು ವೇಧಕನಿಗೆ ಆಜ್ಞಾಪಿಸಿದನು. ಆದರೆ ಬಾಣವನ್ನು ಹೊಡೆದವರು ಯಾರು ಎಂಬದೇನು ತಿಳಿದುಬರಲಿಲ್ಲ. ಅವಕ್ಕೆ ರಾಜನು ಚೋಪದಾರನಾದ ಬಾತವ್ಯನನ್ನು ಕರೆದು 'ನಿನಗೂ ಇದು ಯಾರ ಬಾಣವೆಂಬದು ಗೊತ್ತಾಗಿಲ್ಲವೆ ?'' ಎಂದು ವಿಚಾರಿಸಿದನು.

ಬಾಣಗಳ ಮೇಲೆ ತಮ್ಮ ತಮ್ಮ ಹೆಸರುಗಳನ್ನು ಕೊರೆಯಿಸುವ ರೂಢಿಯು ಪೂರ್ವಕಾಲದಿಂದಲೂ ನಡೆದು ಬಂದಿತ್ತು. ಅದರಂತೆ ಆ ಬಾಣದ ಮೇಲೆ ಆಯುವಿನ ಹೆಸರೂ ಇತ್ತು. ರಾಜನ ಪ್ರಶ್ನೆಯನ್ನು ಕೇಳಿ ಚೋಪದಾರನು ಆ ಬಾಣವನ್ನು ಲಕ್ಷ್ಯಪೂರ್ವಕವಾಗಿ ನೋಡಲಾಗಿ ಅದರ ಮೇಲಿನ ಬರಹವು ಅವನ ಕಣ್ಣಿಗೆ ಬಿದ್ದಿತು. ಅವನು ಮುಪ್ಪಿನವನಾದ್ದರಿಂದ ಅವನ ದೃಷ್ಟಿಗೆ ಆ ಅಕ್ಷರಗಳು ನಿಚ್ಚಳವಾಗಿ ಕಾಣದ್ದರಿಂದ 'ಮಹಾರಾಜರೇ, ಈ ಬಾಣದ ಮೇಲೆ ಅಕ್ಷರಗಳಂತೂ ಇವೆ. ಯಾರ ಹೆಸರೋ ಏನೋ. ನನ್ನ ಮಂದ ದೃಷ್ಟಿಗೆ ಓದಲು ಅಶಕ್ಯವಾದ್ದರಿಂದ ಅದು ಯಾರ ಬಾಣವೆಂಬದು ನನಗೆ ತಿಳಿಯದಾಗಿದೆ.' ಎಂದು ಬಿನ್ನಹಮಾಡಿಕೊಂಡನು.

ಅವನ ಮಾತುಗಳನ್ನು ಕೇಳಿ ರಾಜನು ಆ ಬಾಣವನ್ನು ಕೈಯಲ್ಲಿ ತೆಗೆದುಕೊಂಡು ಅದರ ಮೇಲೆ ಕೆತ್ತಿರುವ ಹೆಸರನ್ನೋದಿ ವಿಚಾರಪರನಾದನು. ರಾಜನ ವಿಚಾರಪರತೆಯನ್ನು ಕಂಡು ಮಾಣವಕನು 'ನಿನಗೆ ಯಾವುದರ ವಿಚಾರ ಬಾಧಿಸುತ್ತಿದೆ' ಎಂದು ವಿಚಾರಿಸಿದನು.

'ಈ ಬಾಣವನ್ನು ಬಿಟ್ಟವನ ಹೆಸರನ್ನು ಕೇಳಿದೆಯೆಂದರೆ ನನಗೆ ಬಂದ ವಿಚಾರದ ಕಾರಣವು ನಿನಗೆ ತಿಳಿಯುವದು. 'ಉರ್ವಶಿಯ ಗರ್ಭಸಂಭೂತನಾದ ಪರಾಕ್ರಮಿ ಪುರೂರವ ರಾಜನ ಮಗನಾದ ಆಯುವಿನ ಬಾಣವು. ಇದು ಶತ್ರುವಿನ ಆಯುಷ್ಯವನ್ನು ಹರಣಮಾಡುವಂಥದಾಗಿದೆ.' ಎಂದು ಬರೆದಿದೆ. ಇದರ ಮೇಲಿಂದ ಏನಿದೆಂಬುದರ ಕಲ್ಪನೆ ನಿನಗೆ ಬಂದಿತೇ ?'

'ನಿನಗೆ ಪುತ್ರಸಂತತಿಯಾಗಿ ನಿನ್ನ ಉತ್ಕರ್ಷವಾದುದನ್ನು ನೋಡಿ ನನಗೆ ಪರಮಾನಂದವಾಗಿದೆ.'

'ಇದು ಹೇಗಾಯಿತೆಂಬುದೇ ನನಗೆ ಗೊತ್ತಿಲ್ಲ. ಹಗಲಿರುಳೂ ನಾನು ಉರ್ವಶಿಯನ್ನು ಬಿಟ್ಟು ಇರುವದೇ ಇಲ್ಲ. ಅವಳು ಗರ್ಭಿಣಿಯಾದುದರ ಸುಳಿವೇ ನನಗೆ ಹತ್ತಲೇ ಇಲ್ಲ. ಅಂದಮೇಲೆ ಅವಳು ಬಾಣಂತಿಯಾದು

ವನ್ನಾದರೂ ಹೇಗೆ ನೋಡಲಿ ! ಕೆಲವು ದಿನ ಮಾತ್ರ ಅವಳ ಮುಖದಲ್ಲಿ ಬಿಳಿ ಛಾಯೆಯು ಕಾಣುತ್ತಿತ್ತು. ಸ್ತನಾಗ್ರಗಳು ತುಂಬಿಕೊಂಡು ಬಿರುಸಾಗಿದ್ದವು. ಅವಳ ಶರೀರವೂ ಜೊಳ್ಳಾದಂತೆ ಕಾಣುತ್ತಿತ್ತು. ಇದಕ್ಕಿಂತಲೂ ಹೆಚ್ಚಿನ ಬಲ ಲಾವಣೆಯಾದ ಲಕ್ಷಣಗಳು ನನ್ನ ಕಣ್ಣಿಗಂತೂ ಬಿದ್ದಿರುವದೇ ಇಲ್ಲ.'

' ಮಾನವ ಸ್ತ್ರೀಯರ ಸ್ಥಿತಿಗೂ ದೇವತಾಸ್ತ್ರೀಯಾದ ಈ ಉರ್ವಶಿಯ ಸ್ಥಿತಿಗೂ ತುಲನೆ ಮಾಡಬೇಡ. ಅವರು ದಿವ್ಯ ಸ್ತ್ರೀಯರಿರುವದರಿಂದ ತಮ್ಮ ಪ್ರಭಾವದ ಮೂಲಕ ಬೇಕಾದ ಸುದ್ದಿಯನ್ನು ಗುಪ್ತವಿಡಲು ಶಕ್ತರಿರುತ್ತಾರೆ.'

' ನೀನನ್ನುವಂತೆ ಇದ್ದರೂ ಇರಬಹುದು. ಆದರೆ ಈ ಹುಡುಗನು ಇಷ್ಟು ದೊಡ್ಡವನಾಗುವ ವರೆಗೆ ಈ ಸುದ್ದಿಯನ್ನು ಅದೇಕೆ ಅವಳು ಮುಚ್ಚಿಟ್ಟಿರಬಹುದು?'

' ಇದರಲ್ಲಿ ಗೂಢವೇನಿದೆ ? ಹೆಂಗಸರು ಪ್ರಸೂತರಾದ ಮೇಲೆ ಅವರ ತಾರುಣ್ಯವು ಕಡಮೆಯಾಗುತ್ತದೆ. ಆದಕಾರಣ ತಾನು ವೃದ್ಧಳಾದಳೆಂದು ಬಗೆದು ರಾಜನು ತನ್ನನ್ನು ಎಲ್ಲಿ ದೂರೀಕರಿಸುವನೋ— ಎಂದು ತಿಳಿದು ಹೀಗೆ ಮಾಡಿರಬಹುದು. ಇದರ ನಿಜವಾದ ಕಾರಣವೇನಿರಬಹುದೆಂಬನ್ನು ಶೋಧಿಸಿ ತೆಗೆ.'

' ಈ ಕೆಲಸ ನನ್ನಂಥವನ ಕೈಯಿಂದಾಗದು. ಹೆಂಗಸರ ವಿಷಯ ! ಅಂದಮೇಲೆ ಅದು ಯಾರಿಗೂ ತಿಳಿಯುವ ಸಂಭವವಿಲ್ಲ. ಅದರಲ್ಲಂತೂ ಇವಳು ದಿವ್ಯಸ್ತ್ರೀ ಬೇರೆ. ಇವಳ ಈ ಗುಪ್ತ ರೀತಿಯ ಬಗ್ಗೆ ಯಾರು ತರ್ಕದ ಲೆಕ್ಕ ಹಾಕುತ್ತ ಕೂಡ್ರುವವರು ?'

ಇಷ್ಟು ದಿನಗಳ ವರೆಗೆ ರಾಜನಿಗೆ ಮಗನಿದ್ದುದು ಗೊತ್ತಿಲ್ಲದ್ದರಿಂದ ತಾನು ನಿಪುತ್ರಿಕನೆಂದು ತಿಳಿದು ದುಃಖಿಸುತ್ತಿದ್ದನು. ಬಾಣದ ಮೇಲಿರುವ ಅಕ್ಷರಗಳನ್ನು ಓದಿ ತನಗೆ ಮಗನಿರುತ್ತಾನೆಂದು ಅವನಿಗೆನಿಸಿತು. ಆದರೂ ಅವನ ವಿಷಯವಾಗಿ ಯಾವ ವಿವರಣೆಗಳೂ ತಿಳಿಯದ್ದರಿಂದ ಸಂಶಯ ಮತ್ತು ವಿವಂಚನೆಗಳಿಗೆ ಅವನು ಈಡಾಗಿದ್ದನು. ಹಾಗೆ ಬಹಳ ಹೊತ್ತೇನು ಅವನು ಕಾಲಕಳೆಯಬೇಕಿರಲಿಲ್ಲ. ಯಾಕೆಂದರೆ ಈ ಸಂಶಯ ನಿವೃತ್ತಿಯಾಗುವ ಸಮಯವು ಶೀಘ್ರದಲ್ಲಿಯೇ ತನ್ನಿಂದ ತಾನೇ ಒದಗಿಬಂದಿತು.

ಚ್ಯವನ ಋಷಿಯ ಆಶ್ರಮವು ನಿರುಪದ್ರವಿಯೂ ಶಾಂತವೂ ಆಗಿತ್ತು. ಆಯುವೂ ಕೂಡ ಆಶ್ರಮವಾಸಿಗಳಾದ ಉಳಿದ ಬಾಲಕರೊಂದಿಗೆ ಇದ್ದು ಕೊಂಡು ಇದೀಗ ತಾನೇ ಬಾಣದಿಂದ ಆ ಪಕ್ಷಿಗೆ ಹೊಡೆದುದರಿಂದ ಅವನ ಕ್ಷಾತ್ರತೇಜವು ಪ್ರಕಟವಾಗಿತ್ತು. ಅದರಿಂದ ಆಶ್ರಮವಾಸಿಗಳ ಆಚರಣೆಯ ವಿರುದ್ಧವಾಗಿ ಅವನು ನಡೆದುಕೊಂಡಂತಾಗಿತ್ತು. ಆದಕಾರಣ ಚ್ಯವನ ಋಷಿಯೂ, ಅಲ್ಲಿಯೇ ಇರುವ ಬೇರೆ ಋಷಿಗಳೂ ಆಯುವನ್ನು ಆಶ್ರಮ ದಲ್ಲಿಟ್ಟುಕೊಳ್ಳಬಾರದೆಂದು ನಿಶ್ಚಯಿಸಿದರು. ಅದರಂತೆ ಸತ್ಯವತಿಯನ್ನೂ ಒಬ್ಬ ಶಿಷ್ಯನನ್ನೂ ಕೊಟ್ಟು ಆಯುವನ್ನು ಪುರೂರವರಾಜನ ಕಡೆಗೆ ಕಳಿಸಿ ಕೊಟ್ಟರು. ಆ ತಾಪಸಿಯು ಆ ಹುಡುಗನನ್ನು ಕರೆದುಕೊಂಡು ರಾಜಗೃಹಕ್ಕೆ ಬಂದಳು. ಚೋಪದಾರನು ಈ ಸುದ್ದಿಯನ್ನು ತಿಳಿಸಲಾಗಿ ರಾಜನ ಆಜ್ಞೆಯಂತೆ ಆ ಹುಡುಗನನ್ನು ಮುಂದೆ ಮಾಡಿಕೊಂಡು ಸತ್ಯವತಿಯು ರಾಜನ ಸಮ್ಮುಖದಲ್ಲಿ ಬಂದಳು.

ಆ ಹುಡುಗನು ಕಣ್ಣಿಗೆ ಬಿದ್ದೊಡನೆ ಮಾಣವಕನು ' ಈ ಹುಡುಗನು ಕ್ಷತ್ರಿಯ ಸಂಭೂತನೆಂದು ತೋರುತ್ತದೆ. ಈ ಬಾಣವಾದರೂ ಇವನದೇ ಇದ್ದಿರಬೇಕು. ಅವನ ಮುಖಲಕ್ಷಣಗಳು ನಿನ್ನವುಗಳನ್ನು ಹೋಲುತ್ತಿವೆ ' ಎನ್ನಲಾಗಿ ರಾಜನು ' ನೀನನ್ನುವಂತೆಯೇ ನಿಜವಾಗಿಯೂ ಇದೆ. ಅವನು ದೃಷ್ಟಿಗೆ ಬಿದ್ದಕೂಡಲೆ ನನ್ನ ಕಣ್ಣುಗಳು ಆನಂದಾಶ್ರುಗಳಿಂದ ತುಂಬಿ ಬಂದವು. ಹೃದಯದಲ್ಲಿ ಪ್ರೇಮವುಂಟಾಗುತ್ತದೆ. ಮನಸ್ಸು ಪ್ರಸನ್ನವಾಗುತ್ತದೆ. ಮೈಯಲ್ಲಿ ರೋಮಾಂಚನವೆದ್ದು ಅವನನ್ನು ಬಿಗಿದಪ್ಪಿಕೊಳ್ಳುವಂತಾಗುತ್ತದೆ ' ಎಂದನು.

ಅಷ್ಟರಲ್ಲಿ ಸತ್ಯವತಿಯು ಆಯುವನ್ನು ಕರೆದುಕೊಂಡು ರಾಜನ ಬಳಿ ಯಲ್ಲಿಯೇ ಬಂದಳು. ಆಗ ರಾಜನು ಆಸನದಿಂದೆದ್ದು ಆ ತಾಪಸಿಗೆ ನಮಸ್ಕರಿ ದನು. ಆಕೆಯು ಅವನನ್ನು ಆಶೀರ್ವದಿಸಿದಳು. ಸತ್ಯವತಿಯು ರಾಜನನ್ನೂ, ಆಯುವನ್ನೂ ನಿರೀಕ್ಷಿಸಿ, ತನ್ನ ಮನಸಿನಲ್ಲಿಯೇ ' ಇವರಿಬ್ಬರೂ ತಂದೆ ಮಗ ಎಂಬದನ್ನು ಸಹಜವಾಗಿ ಯಾರೂ ಹೇಳಬಹುದಾಗಿದೆ. ಈ ಹುಡುಗನ ತಂದೆಯು ಈ ಪುರೂರವರಾಜನೇ ಎಂದು ಮುಖಲಕ್ಷಣಗಳಿಂದ ಬೇಕಾದ ವರು ಗುರುತಿಸಬಲ್ಲರು ' ಎಂದು ವಿಚಾರಮಾಡುತ್ತ ' ಆಯುವೇ, ನಿನ್ನ ತಂದೆಯ ಪಾದಗಳಿಗೆ ನಮಸ್ಕರಿಸು ' ಎಂದು ಹೇಳಿದಳು.

ಆಯುವು ಇಷ್ಟು ದೊಡ್ಡವನಾಗಿ ಬೆಳದಿದ್ದರೂ ಅವನಿಗೆ ತನ್ನ ತಂದೆ ತಾಯಿ ಯಾರು ಎಂಬುದರ ಕಲ್ಪನೆಯೇ ಇರಲಿಲ್ಲ. ಜನ್ಮದಾರಭ್ಯದಿಂದಲೇ ಪಾಲನ ಪೋಷಣ ಮಾಡಿದ ಸತ್ಯವತಿಯೇ ತಾಯಿ ಎಂದೂ, ಆಶ್ರಮಾಧಿಪತಿಯಾದ ಚ್ಯವನಋಷಿಯೇ ತಂದೆಯೆಂದೂ ಮನ್ನಿಸುತ್ತಿದ್ದನು. ಸತ್ಯವತಿಯ ಆಜ್ಞೆಯಂತೆ ಆಯುವು ವಿನೀತ ಭಾವದಿಂದ ಕೈಜೋಡಿಸಿ ರಾಜನಿಗೆ ನಮಸ್ಕರಿಸಿದನು. ಆಗ ರಾಜನು 'ಆಯುಷ್ಮಂತನಾಗು' ಎಂದು ಆಶೀರ್ವಾದ ಮಾಡಿದನು.

ರಾಜನ ಪಾದಸ್ಪರ್ಶಸುಖದಿಂದ ಆಯುವು ಪುಲಕಾಂಕಿತನಾದನು. ಆಗ ಅವನು ತನ್ನ ಮನಸಿನಲ್ಲಿ 'ಇವನು ತಂದೆ, ನಾನು ಮಗನು ಎಂಬ ದೇಹಸಂಬಂಧವನ್ನು ಕಂಡು ನನಗದೆಷ್ಟು ಆನಂದವಾಗುತ್ತಿದೆಯಲ್ಲ! ನಿಜವಾಗಿಯೇ ತಂದೆಯ ತೊಡೆಯ ಮೇಲೆ ಆಡಿ ಬೆಳೆದವರಿಗಂತೂ ಎಷ್ಟು ಆನಂದವಾಗುವದೋ ಯಾರು ಬಲ್ಲರು! ಅವರು ತಮ್ಮ ತಂದೆಯನ್ನು ಎಷ್ಟು ಪರಿಯಿಂದ ಪ್ರೀತಿಸಬಹುದು!' ಎಂದಂದುಕೊಂಡನು.

ಶಿಷ್ಟಾಚಾರದ ಕುಶಲಪ್ರಶ್ನೆಗಳಾದ ಮೇಲೆ ರಾಜನು 'ತಾವು ನನ್ನ ಮೇಲೆ ಅನುಗ್ರಹಿಸಿ ದರ್ಶನಲಾಭ ಕೊಟ್ಟುದಕ್ಕೆ ನಾನು ತಮಗೆ ಆಭಾರಿಯಾಗಿದ್ದೇನೆ. ತಾವು ಯಾವ ಉದ್ದಿಶ್ಯವಾಗಿ ಇಲ್ಲಿಯವರೆಗೆ ಬಂದಿರುವಿರಿ— ಎಂಬದನ್ನು ತಿಳಿಸಬೇಕಾಗಿ ಕೋರಿದ್ದೇನೆ' ಎಂದು ಸತ್ಯವತಿಯನ್ನು ಕೇಳಿದನು.

ಸತ್ಯವತಿಯು 'ಮಹಾರಾಜರೇ ಕೇಳಬೇಕು. ಚಿರಂಜೀವ ಆಯುವು ಜನ್ಮಿಸಿದಾಗಲೆ ಉರ್ವಶಿಯು ಕೆಲವು ಕಾರಣಗಳ ಮೂಲಕವಾಗಿ ಇವನನ್ನು ನನ್ನ ಸ್ವಾಧೀನಪಡಿಸಿದಳು. ನಾನು ನನ್ನ ಅಲ್ಪಯೋಗ್ಯತೆಯಂತೆ ಇಲ್ಲಿಯವರೆಗೆ ಇವನನ್ನು ಪೋಷಿಸಿದ್ದೇನೆ. ಕ್ಷತ್ರಿಯನುಗುಚಿತವಾದ ಜಾತಕರ್ಮಾದಿ ಸಂಸ್ಕಾರಗಳನ್ನು ಭಗವಾನ ಚ್ಯವನಋಷಿಯು ಇವನಿಗೆ ಮಾಡಿಸಿದ್ದಾರೆ. ಇವನಿಗೆ ಎಲ್ಲ ವಿದ್ಯೆಗಳನ್ನೂ ಕಲೆಗಳನ್ನೂ ಹೇಳಿಕೊಟ್ಟಿದ್ದಾರೆ. ಅಲ್ಲದೆ ಧನುರ್ವೇದದ ವಿದ್ಯೆಯನ್ನು ಪೂರ್ತಿಯಾಗಿ ಅಭ್ಯಾಸಮಾಡಿಸಿದ್ದಾರೆ' ಎಂದು ಹೇಳಿದಳು.

'ಬಹಳ ಒಳ್ಳೇಯದೇ ಆಗಿದೆ.'

'ಇವನು ಚ್ಯವನಋಷಿಯ ಆಶ್ರಮದಲ್ಲಿ ಇಲ್ಲಿಯ ವರೆಗೆ ಸುಖದಿಂದ ಬೆಳೆದಿದ್ದಾನೆ. ಇಂದು ಋಷಿ ಬಾಲಕರೊಂದಿಗೆ ಫಲ, ಪುಷ್ಪಗಳನ್ನು ತರಲು ಆಶ್ರಮದ ಹತ್ತಿರವಿರುವ ಅರಣ್ಯಕ್ಕೆ ಹೋಗಿದ್ದನು. ಅಲ್ಲಿ ಅವನು ಆಶ್ರಮವಾಸಿಗಳ ನಿಯಮವನ್ನು ಉಲ್ಲಂಘಿಸಿದನು.'

'ಅವನು ಮಾಡಿದ್ದಾದರೂ ಏನು ?' ಎಂದು ಮಾಣವಕನು ಪ್ರಶ್ನೆ ಕೇಳಿದನು.

'ಬೇರೇನೂ ಇಲ್ಲ. ಆಶ್ರಮದ ಗಿಡವೊಂದರ ಮೇಲೆ ಒಂದು ಪಕ್ಷಿಯು ಮಾಂಸದ ತುಂಡನ್ನು ಬಾಯಲ್ಲಿ ಕಚ್ಚಿಕೊಂಡು ಕುಳಿತಿತ್ತು. ಅದನ್ನು ಕಂಡು ಅದಕ್ಕೆ ಬಾಣವನ್ನು ಹೊಡೆದನು. ಇದು ತಪಸ್ವೀ ಜನರ ಆಚರಣೆಗೆ ವಿರುದ್ಧವಾಗಿದೆ.'

'ಒಳ್ಳೇದು, ಮುಂದೇನಾಯಿತು' ಎಂದು ರಾಜನು ವಿಚಾರಿಸಿದನು.

'ಈ ಸುದ್ದಿಯು ನಮ್ಮ ಗುರುಗಳಾದ ಚ್ಯವನಋಷಿಗಳಿಗೆ ತಿಳಿಯಿತು. ಆಗ ಅವರು ಕೂಡಲೆ ನನಗೆ ಆಜ್ಞೆಯನ್ನು ಮಾಡಿ 'ಈ ಹುಡುಗನನ್ನು ಉರ್ವಶಿಯು ನಮ್ಮಲ್ಲಿರಿಸಿದ್ದಳು. ಈಗ ಅವನನ್ನು ಕರೆದುಕೊಂಡು ಹೋಗಿ ಇವನನ್ನು ಉರ್ವಶಿಯ ಸ್ವಾಧೀನಕ್ಕೆ ಕೊಟ್ಟು ಬಾ' ಎಂದರು. ಹೀಗೆ ಗುರ್ವಾಜ್ಞೆಯಾದ್ದರಿಂದ ನಾನು ಈ ಬಾಲಕನನ್ನು ತೆಗೆದುಕೊಂಡು ಬಂದಿದ್ದೇನೆ. ಆದಕಾರಣ ನನಗೆ ಉರ್ವಶಿಯ ಬೆಟ್ಟಿಯನ್ನು ತೆಗೆದುಕೊಳ್ಳಬೇಕಾಗಿದೆ' ಎಂದು ಹೇಳಿದಳು.

ರಾಜನು ಸತ್ಯವತಿಗೆ ಸ್ವಲ್ಪ ವೇಳೆ ಕುಳಿತುಕೊಳ್ಳಲು ಹೇಳಿ, ಉರ್ವಶಿಯನ್ನು ಕರೆದುಕೊಂಡು ಬರುವಂತೆ ಚೋಪದಾರನಿಗೆ ಆಜ್ಞೆ ವಿಧಿಸಿದನು. ಉರ್ವಶಿಯು ಬರುವ ವರೆಗೆ ರಾಜನಿಗೆ ಯಾವಾಗ ಆ ಅರ್ಭಕನನ್ನು ಬಿಗಿಯಾಗಿ ಅಪ್ಪಿಕೊಳ್ಳುವೆನೋ ಎಂಬಂತಾಗಿತ್ತು. ಆದಕಾರಣ ರಾಜನು 'ವತ್ಸಾ, ಇತ್ತಕಡನೆ ಬಾ. ಉಳಿದ ವಸ್ತುಗಳ ಸ್ಪರ್ಶವು ಆಯಾಯ ಅವಯವಗಳಿಗಷ್ಟೇ ಆಗುತ್ತದೆ. ಆದರೆ ಪುತ್ರನ ವಿಷಯವು ಹಾಗಲ್ಲ. ಸರ್ವಾಂಗಗಳನ್ನೂ ವ್ಯಾಪಿಸುವಂಥವಾಗಿದೆ. ಚಂದ್ರನು ತನ್ನ ಕಿರಣಗಳಿಂದ ಚಂದ್ರಕಾಂತ ಶಿಲೆಯನ್ನು ಹೇಗೆ ದ್ರವಿಸುವನೋ ಹಾಗೆ ನೀನೂ ನನ್ನ ಮನಸ್ಸನ್ನು ಸಂತೋಷಗೊಳಿಸು' ಎಂದನು.

ಆಯುವಿಗೆ ಇನ್ನೂ ನಾಚಿಕೆ, ಸಂಕೋಚವು ಬಿಟ್ಟಿರಲಿಲ್ಲ. ಸತ್ಯವತಿಯು ಹೇಳಿದ ಮೇಲೆಯೇ ಅವನು ಪುರೂರವನು ತನ್ನ ತಂದೆಯೆಂದು ಭಾವಿಸಿ ಕೊಂಡನು. ಅಂದಮೇಲೆ ಅವನಿಗೆ ಸಲುಗೆಯಾದರೂ ಹೇಗೆ ಬರಬೇಕು ? ಸಂಕೋಚಪ್ರವೃತ್ತಿಯಾದರೂ ಹೇಗೆ ಹೋಗಬೇಕು ? ಅದನ್ನು ಕೇಳಿ ಸತ್ಯ ವತಿಯು 'ಮಗೂ, ನಿನ್ನ ತಂದೆಯ ಕಡೆಗೆ ಹೋಗು. ಅವನನ್ನು ಸಂತೋಷ ಗೊಳಿಸು' ಎಂದು ನುಡಿದಳು.

ಅವಳು ಹೇಳಿದನಂತರ ಆಯುವು ರಾಜನ ಸನ್ನಿಧಿಗೆ ಹೋದನು. ಆಗ ಅವನನ್ನು ಆಲಿಂಗಿಸಿಕೊಂಡು ರಾಜನು 'ಹುಡುಗನೇ, ನನ್ನ ಮಿತ್ರನಾದ ಮಾಣವಕ ಬ್ರಾಹ್ಮಣನಿಗೆ ನಿಸ್ಸಂಕೋಚವಾಗಿ ನಮಸ್ಕಾರ ಮಾಡು' ಎಂದು ಹೇಳಿದನು.

'ಅದನ್ನೇನು ನೀನು ಹೇಳಿಕೊಡಬೇಕೆ ? ಅವನಿಗೇಕೆ ಸಂಶಯವು ಬರಬೇಕು ? ನನ್ನ ಮುಖಚರ್ಯೆಯನ್ನು ಕಂಡು ಅವನು ಸಂಶಯಪಟ್ಟು ಕೊಳ್ಳಬಹುದೆಂದು ನಿನಗೆನಿಸಿತೋ ಹೇಗೆ ? ಆದರೆ ಅವನು ಋಷಿಯ ಆಶ್ರ ಮದಲ್ಲಿ ಎಷ್ಟೋ ದಿನಗಳನ್ನು ಕಳೆದಿದ್ದಾನೆ. ಆ ಆಶ್ರಮದಲ್ಲಿ ನನ್ನಸ್ಟೇ ಹೋಲುವ ಅನೇಕ ವಾನರರ ಪರಿಚಯವು ಅವನಿಗಿರಲಿಕ್ಕೆ ಸಾಕು' ಎಂದು ಮಾಣವಕನೆನ್ನಲು ಆಯುವು ಮುಗುಳುನಗೆ ನಗುತ್ತ ಮಾಣವಕನಿಗೆ ನಮ ಸ್ಕರಿಸಿದನು. 'ನಿನಗೆ ಕಲ್ಯಾಣವಾಗಲಿ ! ಉದಂಡ ಆಯುಷ್ಯವಾಗಲಿ !' ಎಂದು ಮಾಣವಕನು ಅವನನ್ನು ಆಶೀರ್ವದಿಸಿದನು. ಅಷ್ಟರಲ್ಲಿ ಚೋಪ ದಾರನು ಊರ್ವಶಿಯನ್ನು ಕರೆದುಕೊಂಡು ಬಂದನು. ಅವಳು ಸಿಂಹಾಸನದಲ್ಲಿ ಕುಳಿತ ರಾಜನ ತೊಡೆಯ ಮೇಲೆ ಕುಳಿತಿರುವ ಆಯುವನ್ನು ನೋಡಿದಳು. ಅವನು ಜನ್ಮಿಸಿದ ದಿನದ ಮೇಲೆ ಇಂದೇ ಅವನನ್ನು ಅವಳು ನೋಡಿದ್ದರಿಂದ ಒಮ್ಮಿಗೆಲೆ ಅವನ ಗುರುತು ಸಿಗಲಿಲ್ಲ. ಅವಳ ಕಣ್ಣಿಗೆ ಸತ್ಯವತಿಯು ಕೂಡಲೆ ಬಿದ್ದುದರಿಂದ ಅವಳಿಗೆ ತನ್ನ ಮಗನ ಪರಿಚಯವು ಹತ್ತಿತು. 'ಇಷ್ಟರಲ್ಲಿಯೇ ಎಷ್ಟೊಂದು ದೊಡ್ಡವನಾಗಿದ್ದಾನೆ !' ಎಂದೆಂದುಕೊಂಡು ಅವಳು ಆಶ್ಚರ್ಯ ಪಟ್ಟಳು.

ಊರ್ವಶಿಯ ಬರುವಿಕೆಯನ್ನು ಕಂಡು ರಾಜನು 'ಆಯುವೇ, ನಿನ್ನನ್ನು ನೋಡಬೇಕೆಂದು ಉತ್ಸುಕಳಾಗಿಯೂ ಪ್ರೇಮದಿಂದ ಸುರಿಯುತ್ತಿರುವ

ಎದೆಹಾಲಿನಿಂದ ತೊಯ್ದುಹೋದ ಸೆರಗಿನಿಂದಲೂ ಬರುವಂಥ ನಿನ್ನ ತಾಯಿಗೆ ವಂದಿಸು ’ ಎಂದನು. ಅಷ್ಟರಲ್ಲಿ ಸತ್ಯವತಿಯು ಆಯುವನ್ನು ಕೈಯಿಂದ ಹಿಡಿದುಕೊಂಡು ಊರ್ವಶಿಯ ಹತ್ತಿರಕ್ಕೆ ಬಂದಳು. ಊರ್ವಶಿಯು ಸತ್ಯವತಿಗೆ ನಮಸ್ಕರಿಸಲಾಗಿ ‘ ನಿನ್ನ ಪತಿಗೆ ಬೇಕಾದವಳಾಗು ’ ಎಂದು ಅವಳು ಆಶೀರ್ವದಿಸಿದಳು.

ಆಯುವು ‘ ಅವ್ವಾ, ನಮಸ್ಕರಿಸುತ್ತೇನೆ ’ ಎಂದು ಊರ್ವಶಿಗೆ ನಮಸ್ಕರಿಸಿದನು. ಆಗ ಊರ್ವಶಿಯು ‘ ಮಗನೇ, ತಂದೆಯ ಸೇವೆಯನ್ನು ಮಾಡುವವನಾಗು ’ ಎಂದು ಅವನನ್ನು ಹರಸಿದಳು. ನಂತರ ಊರ್ವಶಿಯು ಸತ್ಯವತಿಯನ್ನೂ ಆಯುವನ್ನೂ ಕರೆದುಕೊಂಡು ರಾಜನ ಬಳಿಗೆ ಹೋಗಿ ‘ ರಾಜರಿಗೆ ಜಯಜಯಕಾರವಾಗಲಿ ! ’ ಎಂದಳು. ರಾಜನು ‘ ಪುತ್ರವತಿಯಾದ ನಿನಗೆ ಸ್ವಾಗತವು ! ’ ಎಂದು ಅವಳನ್ನು ತನ್ನ ಆಸನದಲ್ಲಿ ಕುಳ್ಳಿರಿಸಿಕೊಂಡನು. ಉಳಿದವರೂ ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಂಡರು. ಆಗ ಸತ್ಯವತಿಯು ‘ ಊರ್ವಶಿಯೇ, ನಿನ್ನ ಮಗನ ಎಲ್ಲ ವಿದ್ಯಾಭ್ಯಾಸವು ಪೂರ್ಣವಾಗಿದೆ. ಸದ್ಯಕ್ಕೆ ಅವನು ಕವಚಧಾರಿಯಾಗಿ ಯುದ್ಧಕ್ಕೆ ಹೋಗಲು ಯೋಗ್ಯವಾಗಿದ್ದಾನೆ. ಇಷ್ಟು ದಿನಗಳ ವರೆಗೆ ಪಾಲನ-ಪೋಷಣ ಮಾಡಿದ ಈ ಹುಡುಗನನ್ನು ನಿನ್ನ ಗಂಡನ ಸಮಕ್ಷಮದಲ್ಲಿಯೇ ನಿನ್ನ ಸ್ವಾಧೀನಪಡಿಸಿದ್ದೇನೆ. ನನ್ನ ಕೆಲಸವಾಯಿತು. ಈಗ ನೀವು ನನಗೆ ಅಪ್ಪಣೆಯನ್ನು ದಯಪಾಲಿಸಿದರೆ ನಾನು ಆಶ್ರಮಕ್ಕೆ ಹೋಗಬೇಕೆನ್ನುತ್ತೇನೆ. ನನ್ನ ಆಶ್ರಮಧರ್ಮಕ್ಕೆ ವ್ಯತ್ಯಯವಾಗುತ್ತಿದೆ. ಕಾರಣ ಬೇಗನೆ ನನ್ನನ್ನು ಇಲ್ಲಿಂದ ಕಳಿಸಿರಿ ’ ಎಂದು ಬೇಡಿಕೊಂಡಳು.

‘ ಬಹಳ ದಿನಗಳ ಮೇಲೆ ನಿನಗೆ ಆರ್ಯಪುತ್ರರ ದರ್ಶನವಾಯಿತು. ಈಗ ನೀನು ಸ್ವಸ್ಥಚಿತ್ತಳಾಗಿ ಆಶ್ರಮಕ್ಕೆ ಹೋಗಬಹುದು ’ ಎಂದು ಊರ್ವಶಿಯು ನಿರೋಪಿಸಲು ಸತ್ಯವತಿಯು ಹೊರಡಲನುವಾದಾಗ ರಾಜನು ‘ ಭಗವಾನ್ ಚ್ಯವನ ಋಷಿಗಳಿಗೆ ನನ್ನ ಶಿರಸಾಷ್ಟಾಂಗ ನಮಸ್ಕಾರಗಳನ್ನು ಅರ್ಪಿಸಬೇಕು ’ ಎಂದು ಅವಳಿಗೆ ಅರಿಕೆ ಮಾಡಿಕೊಂಡನು. ಅದನ್ನು ಕೇಳಿಕೊಂಡು ಆ ತಾಪಸಿಯು ‘ ಆಗಲಿ, ಹೇಳುತ್ತೇನೆ ’ ಎಂದು ಅಲ್ಲಿಂದ

ಹೊರಟುಬಿಟ್ಟಳು. ಆಯುವಿಗೆ ಇಲ್ಲಿಯ ವರೆಗೆ ಸತ್ಯವತಿಯೇ ತಾಯಿಯಾ ಗಿದ್ದಳು. ಅವಳಿಗೆ ಇವನು ಮಗನಾಗಿದ್ದನು. ಸತ್ಯವತಿಯು ಹೊರಡುವ ದನ್ನು ಕಂಡು ಆಯುವು ಕಣ್ತುಂಬ ನೀರು ತಂದು, ಅವಳನ್ನು ಅಪ್ಪಿಕೊಂಡು 'ತಾಯೀ, ಸತ್ಯವತೀ, ನಿಜವಾಗಿಯೇ ಹೊರಟುಬಿಟ್ಟೆಯಾ ? ನನ್ನನ್ನೇಕೆ ಇಲ್ಲಿ ಬಿಟ್ಟು ಹೊರಟೆ ? ನನ್ನನ್ನೂ ಕರೆದುಕೊಂಡು ಹೋಗು' ಎಂದು ಹೇಳಿ ಕೊಂಡನು.

ಸಂಬಂಧಕ್ಕಿಂತಲೂ ಸಹವಾಸದ ಸೆಳೆತವು ಬಹಳ ಬಲವತ್ತರವಾಗಿರು ತ್ತದೆ. ಪ್ರತ್ಯಕ್ಷ ಹಡೆದ ತಾಯಿತಂದೆಗಳು ಪ್ರೇಮದಿಂದ ಮುದ್ದುಬೀರು ತ್ತಿದ್ದರೂ ಆಯುವಿಗೆ ಅದೇನು ವಿಶೇಷವೆಂದು ಎನಿಸಲೇ ಇಲ್ಲ. ಅವನು ಅಳುವೊಗದವನಾಗಿ ಸತ್ಯವತಿಯ ಬೆನ್ನುಹತ್ತಲು ಹಾತೊರೆಯಹತ್ತಿದನು. ಆಗ ಅವನನ್ನು ರಂಬಿಸುತ್ತ ಅವನ ಗದ್ದತುಟಿಗಳನ್ನು ಹಿಡಿದು ಮುದ್ದಿಸುತ್ತ ರಾಜನು 'ಮಗುವೇ, ಇಷ್ಟು ದಿವಸ ಬ್ರಹ್ಮಚರ್ಯಾಶ್ರಮಿಯಾದ್ದರಿಂದ ಆ ಆಶ್ರಮದಲ್ಲಿದ್ದೆ. ಈಗ ನಿನಗೆ ಎರಡನೆಯ ಆಶ್ರಮವಾದ ಗೃಹಸ್ಥಾಶ್ರಮ ಸ್ವೀಕರಿಸುವ ವಯಸ್ಸಾಗಿದೆ. ಅಂದಮೇಲೆ ಇನ್ನೇಕೆ ಆ ಆಶ್ರಮವಾಸವನ್ನು ಅಪೇಕ್ಷಿಸುವೆ ? ಮುಂದೆ ಮೂರನೆಯ ಆಶ್ರಮ—ವಾನಪ್ರಸ್ಥವನ್ನು ಸ್ವೀಕರಿ ಸಿದಾಗ ಹೋಗುವಿಯಂತೆ' ಎನ್ನಲಾಗಿ ಸತ್ಯವತಿಯು ಬಾಲಕನ ತಲೆ ಗೂದಲನ್ನು ನೇವರಿಸುತ್ತ 'ನಿನ್ನ ತಂದೆಯು ಹೇಳಿದಂತೆ ನಡೆ' ಎಂದು ಅವ ನನ್ನು ಸಮಾಧಾನಪಡಿಸಿದಳು.

ಆಯುವು ವಯಸ್ಸಿನಿಂದ ಚಿಕ್ಕವನಾಗಿದ್ದರೂ ಅವನ ಬುದ್ಧಿಯು ಪ್ರೌಢವಾಗಿತ್ತು. ಎಲ್ಲರೂ ಉಪದೇಶ ಮಾಡುವವರೇ. ಆದ್ದರಿಂದ ಅವನು ಅವರ ಉಪದೇಶಕ್ಕೆ ತಲೆಬಾಗಿ ಹುಡುಗತನದ ಹಟವನ್ನು ಬಿಟ್ಟನು. ಆದರೂ ಆಶ್ರಮದಲ್ಲಿದ್ದಾಗ ಆಡಲು ಬೇಕೆಂದು ಒಂದು ನವಿಲನ್ನು ಅವನು ಸಾಕಿ ದ್ದನು. ಅದರ ನೆನಪಾಗಿ ಅವನು 'ಸತ್ಯವತೀ ತಾಯೀ, ನನ್ನ ತೊಡೆಯ ಮೇಲೆ ಮಲಗಿ ಸುಖವಾಗಿ ನಿದ್ರೆ ಮಾಡುತ್ತಿದ್ದ ಆ ನನ್ನ ನವಿಲುಮರಿಯ ಗರಿಗಳು ದೊಡ್ಡವಾದಾಗ ನನಗವನ್ನು ಇತ್ತ ಕಳಿಸಿಕೊಡಬೇಕು' ಎಂದು ಬೇಡಿಕೊಂಡನು.

ಸತ್ಯವತಿಯು ಅವನ ಮಾತನ್ನು ಕೇಳಿ ಅದರಂತೆ ಮಾಡುವೆನೆಂದು ಅವನನ್ನು ಸಮಾಧಾನಗೊಳಿಸಿ, ಹೊರಟಾಗ ರಾಜ-ರಾಣಿಯರು ಆಕೆಗೆ ನಮಸ್ಕರಿಸಿದರು. ಅವಳು ಅವರನ್ನು ಯಥೋಚಿತವಾಗಿ ಆಶೀರ್ವದಿಸಿದಳು. ಆಯುವಿನ ಮೇಲೆ ಅವಳ ಪ್ರೀತಿ ವಿಶೇಷವಾಗಿದ್ದರಿಂದ ಅವನನ್ನು ಬಿಟ್ಟು ಹೋಗುವದು ಅವಳ ಜೀವದಸುತ್ತು ಬಂದಿತ್ತು. ಆದರೂ ಗಟ್ಟಿ ಮನಸು ಮಾಡಿ ಅವಳು ಅಲ್ಲಿಂದ ಕಾಲ್ಕಿತ್ತಿದಳು. ಅವಳು ಕಣ್ಮರೆಯಾಗುವ ವರೆಗೆ ಆಯುವು ಒಂದೇಸವನೆ ಅವಳನ್ನೇ ನೋಡುತ್ತ ಬಿಕ್ಕಿ ಬಿಕ್ಕಿ ಅಳತೊಡಗಿ ದನು. ಅವಳು ಕಣ್ಮರೆಯಾದಮೇಲಂತೂ ಅವನ ಅಳುವು ಮಿತಿಮೀರಿತು. ಆಗ ಊರ್ವಶಿ-ಪುರೂರವರು ಬಹು ಪ್ರಯಾಸಬಟ್ಟು ಅವನನ್ನು ಸಮಾ ಧಾನಗೊಳಿಸಬೇಕಾದರೆ ಸಾಕುಬೇಕಾಯಿತು.

ಪುತ್ರ ಪ್ರಾಪ್ತಿಯಿಂದ ಬಹಳ ಆನಂದಿತನಾದ ಪುರೂರವನು 'ಊರ್ವಶೀ, ಇಂದ್ರಾಣಿಯ ಹೊಟ್ಟೆಯಿಂದುತ್ಪನ್ನನಾದ ಜಯಂತನೆಂಬ ಪುತ್ರನ ಯೋಗ ದಿಂದ ಇಂದ್ರನು ಪುತ್ರರಿದ್ದಂಥವರಲ್ಲಿ ಹೇಗೆ ಶ್ರೇಷ್ಠನಾಗಿರುವನೋ ಹಾಗೆ ನಾನೂ ನಿನ್ನ ಮಗನಾದ ಆಯುವಿನ ಯೋಗದಿಂದ ಶ್ರೇಷ್ಠನಾಗಿದ್ದೇನೆ' ಎಂದು ಹೇಳಿದನು.

ರಾಜನಿಗೆ ಪುತ್ರನ ಮುಖದರ್ಶನವಾದ ಮೇಲೆ ತನಗಿನ್ನು ರಾಜನ ವಿಯೋಗವಾಗುವದೆಂಬ ಮಾತು ಇಲ್ಲಿಯ ವರೆಗೆ ಊರ್ವಶಿಯ ಲಕ್ಷ್ಯದಲ್ಲಿ ಬಂದಿರಲಿಲ್ಲ. ರಾಜನ ಮುಖದಿಂದ ಇಂದ್ರನ ಹೆಸರು ಬಂದಾಗ ಮಾತ್ರ ಅವ ಳಿಗೆ ಇಂದ್ರನು ಹೇಳಿದ ಮಾತಿನ ನೆನಪು ಬಂದಿತು. ಇನ್ನುಮೇಲೆ ರಾಜನನ್ನು ತ್ಯಜಿಸಿ ತಾನು ಹೋಗಲೇಬೇಕೆಂದು ಅವಳು ಅಳತೊಡಗಿದಳು. ಅದನ್ನು ನೋಡಿ ಮಾಣವಕನು 'ಇಂಥ ಆನಂದದಾಯಕ ಪ್ರಸಂಗದಲ್ಲಿ ನಿನ್ನ ಕಣ್ಣು ಗಳಲ್ಲಿ ನೀರೇಕೆ ?' ಎಂದು ಊರ್ವಶಿಯನ್ನು ಕೇಳಿದನು.

ರಾಜನೂ ದುಃಖಿತನಾಗಿ 'ಸುಂದರಿಯೇ, ನನ್ನ ವಂಶವನ್ನು ವೃದ್ಧಿ ಗೊಳಿಸುವ ಮಗನನ್ನು ನೋಡಿ ನನಗೆ ಪರಮಾನಂದವಾಗಿದೆ. ಹೀಗಿದ್ದು ನಾರವು ಹರಿದು ಟಪಟಪನೆ ಕೆಳಗೆ ಬೀಳುತ್ತಿರುವ ಮುತ್ತುಗಳಂತೆ ನಿನ್ನ ಪುಷ್ಟ ಸ್ತನಗಳ ಮೇಲೆ ಅಶ್ರುಬಿಂದುಗಳನ್ನುದುರಿಸುತ್ತ ಈಗ ಅಳುವಿಯೇಕೆ?' ಎಂದು ವಿಚಾರಿಸಿದನು.

ಅದನ್ನು ಕೇಳಿ ನಿಟ್ಟುಸಿರು ಬಿಟ್ಟು ಉರ್ವಶಿಯು ' ಮಹಾರಾಜರೇ, ಕೇಳಬೇಕು. ಪುತ್ರನ ದರ್ಶನದಿಂದ ನನಗೆ ಆನಂದವಾದ ಕಾರಣ ಒಂದು ಮಾತಿನ ಸ್ಮರಣವು ನನಗಾಗಿರಲಿಲ್ಲ. ಆದರೆ ತಮ್ಮ ಮುಖದಿಂದ ಇಂದ್ರನ ಹೆಸರು ಬಂದುದರಿಂದ ನನಗೆ ಇಂದ್ರನು ವಿಧಿಸಿದ ಆಜ್ಞೆಯು ನೆನಪಾಯಿತು ' ಎಂದಳು.

' ಇಂದ್ರನ ಆಜ್ಞೆಯೇನಾಗಿದೆ ? '

' ಈ ಮೊದಲು ನಾನು ಸ್ವರ್ಗದಲ್ಲಿರುವಾಗ ನಿಮ್ಮಲ್ಲಿ ನನ್ನ ಮನಸು ನಟ್ಟುಹೋಗಿದ್ದರಿಂದ ನಾನೊಂದು ತಪ್ಪು ಮಾಡಿದ್ದೆನು. ಆದ್ದರಿಂದ ಗುರುಗಳು ನನಗೆ ಶಾಪ ಕೊಟ್ಟರು. ಇಂದ್ರನು ಅದಕ್ಕೊಂದು ಕರಾರು ಹಾಕಿದನು.'

' ಆ ಕರಾರವೇನು ? '

' ನಿನಗೆ ಯಾವಾಗ ಪುತ್ರನಾಗುವನೋ, ಅವನ ಮುಖವನ್ನು ರಾಜನು ಯಾವಾಗ ನೋಡುವನೋ ಆಗ ನೀನು ಪುನಃ ನನ್ನ ಕಡೆಗೆ ಬರಬೇಕು ' ಎಂದು ಇಂದ್ರನು ಆಜ್ಞೆಯನ್ನಿತ್ತನು. ಅದರಿಂದ ನಾನು ವಿಯೋಗವಾಗಬಾರದೆಂದು ಬಗೆದು ಈ ಪುತ್ರ ಜನನವಾದ ಕೂಡಲೇ ಇವನನ್ನು ಚ್ಯವನ ಋಷಿಯ ಆಶ್ರಮದಲ್ಲಿದ್ದಂಥ-ಇಲ್ಲಿ ಬಂದುಹೋದಂಥ-ಸತ್ಯವತಿಯ ಉಡಿಯಲ್ಲಿ ಹಾಕಿ ಬಂದಿದ್ದೆನು. ಅವನೀಗ ಪ್ರೌಢನೂ, ತಂದೆಯ ಸೇವೆಯನ್ನು ಮಾಡಲು ಯೋಗ್ಯನೂ ಆಗಿರುವನೆಂಬದನ್ನು ಋಷಿಗಳು ಕಂಡು ಆಯುವನ್ನು ಇತ್ತಕಡೆಗೆ ಕಳುಹಿಕೊಟ್ಟಿದ್ದಾರೆ. ಅವುದು ಬೇಗನೆ ಆಗಬಾರದೆಂದು ನಾನು ಇಚ್ಛಿಸಿದ್ದೇನೋ ಅದೇ ದೈವದ ಒತ್ತಾಯದಿಂದ ಬೇಗನೆ ಆಗಿಬಿಟ್ಟಿತು. ಇದಕ್ಕೇನು ಮಾಡುವದು ? ಉಪಾಯವೇ ಇಲ್ಲ. ನನ್ನ—ನಿಮ್ಮ ಸಹವಾಸದ ಋಣವು ಇಂದಿಗೆ ತೀರಿದಂತಾಯಿತು. ಇನ್ನು ಮುಂದೆ ನಾನಿಲ್ಲಿರುವದು ಸರ್ವಥಾ ಶಕ್ಯವಿಲ್ಲ.'

ಉರ್ವಶಿಯು ಹೇಳಿದ ಮಾತುಗಳನ್ನು ಕೇಳಿ ಎಲ್ಲರಿಗೂ ದುಃಖವಾಯಿತು. ರಾಜನಿಗಂತೂ ಮೂರ್ಛೆಯೇ ಬಂದಿತು. ಸುತ್ತಲಿದ್ದ ರಾಜನ ಪರಿವಾರದವರು ರಾಜನಿಗೆ ಶೈತ್ಯೋಪಚಾರಗಳನ್ನು ಮಾಡಿ ಅವನನ್ನು ಸಾವಧಾನಗೊಳಿಸಿದರು. ಆಗ ಮಾಣವಕನು ಕೈಮೇಲೆ ಮಾಡಿ ' ಅಬ್ರಹ್ಮಣ್ಯಂ, ಅಬ್ರಹ್ಮಣ್ಯಂ ' ಎಂದನು.

ಸ್ವಲ್ಪ ಹೊತ್ತಿನ ಮೇಲೆ ರಾಜನು ಎಚ್ಚೆತ್ತು 'ಈ ದುಷ್ಟ ದೈವವು ಸುಖಕ್ಕೆ ಆತಂಕವಾಗಿ ಹೇಗೆ ಬರುತ್ತಿದೆ ನೋಡಿರಿ. ಪುತ್ರಪ್ರಾಪ್ತಿಯಾಗಿ ನನಗೆ ಮನಸಿನ ಸಮಾಧಾನವಾಗಿತ್ತು. ಅಷ್ಟರಲ್ಲಿಯೇ ಈ ಉರ್ವಶಿಯ ವಿಯೋಗವಾಗುವ ಪ್ರಸಂಗ ಬರಬೇಕೆಂದರೇನು ? ಬಿಸಿಲುಗಾಲದ ಬೇಗೆ ಯಿಂದ ಸುರುಟಿಸಿದ ಗಿಡಗಳ ಮೇಲೆ ಮಳೆಯಾಗಿ ಶಾಂತತೆ ಪ್ರಾಪ್ತ ವಾಯಿತೆನ್ನುವಷ್ಟರಲ್ಲಿ ಅವುಗಳ ಮೇಲೆ ಸಿಂಚಿನ ಹೊಡೆತವು ಬಿದ್ದಂತೆ ನನ್ನ ಅವಸ್ಥೆಯಾಗಿದೆ ' ಎಂದನು.

ಮಾಣವಕನು 'ಹೌದಲ್ಲದು ! ಅರ್ಥವೆಂಬುದೇಸಿದೆಯೋ ಅದ ರೊಂದಿಗೆ ಅನರ್ಥವೂ ಯಾವಾಗಲೂ ಇರತಕ್ಕದೇ. ಆದಕಾರಣ ಈಗ ನೀನು ವಲ್ಕಲಗಳನ್ನು ಧರಿಸಿಕೊಂಡು ತಪೋವನಕ್ಕೆ ಹೊರಟುಹೋಗಬೇಕೆಂದು ನನ ಗೆನಿಸುತ್ತಿದೆ ' ಎಂದನು.

ಉರ್ವಶಿಯು ದುಃಖವನ್ನು ತಡೆಯಲಾರದೆ ಗಟ್ಟಿಯಾಗಿ ಅಳುತ್ತ 'ಅಯ್ಯೋ ನನ್ನ ದೈವವೇ ! ಪುತ್ರಪ್ರಾಪ್ತಿಯಾಗುತ್ತಲೇ ನಾನು ಸ್ವರ್ಗಕ್ಕೆ ಹೋಗಬೇಕೆಂದರೆ— ನಾನು ಇಷ್ಟೇ ಕೆಲಸಕ್ಕಾಗಿ ಬಂದಿದ್ದೆನೇನೋ ಎನಿಸಿದೆ. ನನ್ನ ಮೇಲಿ ಮಹಾರಾಜರ ಪ್ರೇಮವು ಸಕಾರಣವಾಗಿತ್ತೆಂದು ಅನ್ನುವ ಪ್ರಸಂಗ ಬಂದಿತಲ್ಲಾ !' ಎಂದಳು.

'ಪ್ರಿಯೇ, ಹಾಗೆನ್ನಬೇಡ. ನೀನು ಪರಾಧೀನಳು. ವಿಯೋಗವಾಗ ಬೇಕೆಂದು ನಿನ್ನ ಮನಸಿನಲ್ಲಿಲ್ಲ; ಆದರೆ ಅದನ್ನು ತಪ್ಪಿಸುವದು ನಿನ್ನಿಂದ ಸಾಧ್ಯ ವಿಲ್ಲ; ಅಸಮರ್ಥಳಾಗಿರುವಿ. ಆದ್ದರಿಂದ ನಿನ್ನ ಒಡೆಯನಾದ ಇಂದ್ರನ ಆಜ್ಞೆಯಂತೆ ವರ್ತಿಸು. ಆಯಿತು ನನಗಾದರೂ ಇಲ್ಲಿದ್ದು ಮಾಡುವದೇನಿದೆ ! ನಾನೂ ಈಗಿಂದೀಗಲೇ ಈ ನಿನ್ನ ಮಗನಿಗೆ ರಾಜ್ಯಾಭಿಷೇಕವನ್ನು ಮಾಡಿ ಮೃಗಗಳ ಸಮೂಹವು ಎಲ್ಲಿ ಸುಖದಿಂದ ಸಂಚಾರಮಾಡುವವೋ ಅಂಥ ಅರಣ್ಯವನ್ನು ಆಶ್ರಯಿಸುವೆನು ' ಎಂದು ರಾಜನು ಹೇಳಿದನು.

ಅದನ್ನು ಕೇಳಿ ರಾಜ್ಯದ ಭಾರವನ್ನು ತನ್ನ ತಲೆಯ ಮೇಲೆ ರಾಜನು ಹೊರಿಸುತ್ತಾನೆಂಬದನ್ನು ತಿಳಿದು ಆಯುವು 'ತಂದೆಯೇ, ದೊಡ್ಡ ದೊಡ್ಡ ಪರಾಕ್ರಮಿ ರಾಜರು ಹೊರತಕ್ಕ ಭಾರವನ್ನು ಇನ್ನೂ ಸಣ್ಣವನಾದ ನನ್ನ ತಲೆಯ ಮೇಲೆ ಹೇರಬಾರದು ' ಎಂದು ಬಿನ್ನವಿಸಿಕೊಂಡನು.

'ಮಗನೇ, ನಿನಗೆ ಗೊತ್ತಿರುವದಿಲ್ಲ. ನೀನು ಹಾಗೆ ಮಾತನಾಡಬೇಡ. ಗಂಧದ್ವೀಪವೆಂಬ ಆನೆಯು ಚಿಕ್ಕದಿದ್ದರೂ ಅದು ಎರಡನೆಯ ಆನೆಯನ್ನು ಸಹಜವಾಗಿ ಸೋಲಿಸಬಲ್ಲದು. ಸರ್ಪವು ಸಣ್ಣದಿದ್ದರೂ ಅದರ ವಿಷವು ಪ್ರಾಣವನ್ನು ಹೀರಲು ಸಮರ್ಥವಿರುತ್ತದೆ. ಯೋಗ್ಯ ರಾಜಪುತ್ರನು ಚಿಕ್ಕನಿದ್ದರೂ ಅವನು ರಾಜ್ಯಪರಿಪಾಲನೆಯನ್ನು ಮಾಡಲು ಶಕ್ತನಾಗುತ್ತಾನೆ. ವಯಸ್ಸಿನ ಮೇಲೆ ಯಾವುದೂ ಅವಲಂಬಿಸಿರುವದಿಲ್ಲ. ಅಂಥ ಗುಣಗಳು ಹುಟ್ಟಿನಿಂದಲೇ ನಿನಗೆ ಪ್ರಾಪ್ತವಾಗಿರುತ್ತವೆ. ಆದಕಾರಣ ರಾಜ್ಯದ ಭಾರವನ್ನು ಹೊರಲು ನೀನು ಯೋಗ್ಯನಾಗಿರುವಿ' ಎಂದು ರಾಜನು ಆಯುವಿಗೆ ಹೇಳಿ. ಚೋಪದಾರನನ್ನು ಕರೆದು 'ಲಾತವ್ಯನೇ, ನನ್ನ ಆಜ್ಞೆಯೆಂದು ಮುಖ್ಯ ಪ್ರಧಾನಿಯಾದ ಪರ್ವತನಿಗೆ ತಿಳಿಸು: ನನ್ನ ಮನಸ್ಸಿನಲ್ಲಿ ಈ ನನ್ನ ಪ್ರಿಯ ಪುತ್ರನಾದ ಆಯುವಿಗೆ ರಾಜ್ಯಾಭಿಷೇಕ ಮಾಡುವದಿದೆ. ಆದಕಾರಣ ರಾಜ್ಯಾಭಿಷೇಕದ ಸರ್ವ ಸಿದ್ಧತೆಯನ್ನು ಮಾಡಲು ಹೇಳು' ಎಂದು ವಿಧಿಸಿದನು. ರಾಜನ ಈ ಆಜ್ಞೆಯು ಯಾರ ಮನಸ್ಸಿಗೂ ಯೋಗ್ಯವೆಂದು ಕಂಡುಬರಲಿಲ್ಲ. ಆದರೂ ಚೋಪದಾರನು ನಿರುಪಾಯನಾಗಿ ರಾಜನಿಗೆ ನಮಸ್ಕರಿಸಿ ಪ್ರಧಾನ ಮಂತ್ರಿಯ ಕಡೆಗೆ ತೆರಳಿದನು.

ಮಾಣವಕನು ನಗೆಚೇಷ್ಟೆಮಾಡಿ ರಾಜನಿಗೆ ತಪೋವನಕ್ಕೆ ಹೋಗು ಎಂದು ಈ ಮೊದಲೇ ಅಂದಿದ್ದನು. ಆದರೆ ರಾಜನು ಅದನ್ನು ಗಟ್ಟಿಯೇ ಮಾಡಿದನು. ಪುತ್ರನಿಗೆ ರಾಜ್ಯಾಭಿಷೇಕ ಮಾಡಿ ರಾಜನು ಅರಣ್ಯಕ್ಕೆ ಹೊರಡಬೇಕೆಂದು ಮಾಡಿರುವಾಗ ಒಂದು ವಿಘ್ನವು ನಡುವೆ ಬಂದಿತು. ವಾಸ್ತವಿಕ ಅವನು ವಿರಕ್ತನಾಗಿ ತಪೋವನಕ್ಕೆ ಹೊರಟಿರಲಿಲ್ಲ. ಕೇವಲ ಉರ್ವಶಿಯ ವಿರಹಯಾತನೆಯನ್ನು ಸಹಿಸಲಾರದೆ ಅವನು ಹಾಗೆ ನಿಶ್ಚಯಿಸಿದ್ದನು.

ಪುರೂರವನು ಇಂದ್ರನ ಸಹಾಯಕನೂ ಪರಮ ಮಿತ್ರನೂ ಆಗಿದ್ದನು. ಇಂದ್ರಾದಿ ದೇವತೆಗಳಿಗೆ ಈ ತ್ರೈಲೋಕ್ಯದೊಳಗಿನ ವೃತ್ತಗಳು ತಮ್ಮಿಂದ ತಾವೇ ಗೊತ್ತಾಗುತ್ತವೆ. ತನಗೆ ಯುದ್ಧ ಸಮಯದಲ್ಲಿ ನೆರವಾಗುವ ರಾಜಾ ಪುರೂರವನು ಸರ್ವ ಸಂಗ ಪರಿತ್ಯಾಗಮಾಡಿ ತಪೋವನಕ್ಕೆ ಹೊರಡುತ್ತಾನೆ ಎಂಬ ಸುದ್ದಿಯು ಇಂದ್ರನಿಗೆ ಆ ಕ್ಷಣಕ್ಕೇ ತಿಳಿದುಬಿಟ್ಟಿತು. ತಪೋವನಕ್ಕೆ

ಹೋಗುವದೆಂದರೆ ಯಾವತ್ತೂ ಪ್ರಾಣಿಗಳಿಗೆ ಅಭಯವನ್ನು ಕೊಟ್ಟು ಶಸ್ತ್ರವನ್ನು ಕೆಳಗಿಟ್ಟಂತೆಯೇ. ಅಂದರೆ ಸಿದ್ಧ ಪುರುಷನಾದಂತೆಯೇ. ದೇವತೆಗಳ ಪ್ರತಿಸ್ಪರ್ಧಿಗಳಾದ ದೈತ್ಯರು ಯಾವಾಗಲೂ ಯುದ್ಧವನ್ನು ಮಾಡತಕ್ಕ ಬುದ್ಧಿಯುಳ್ಳವರಾಗಿದ್ದರು. ಬೇಗನೆ ಯುದ್ಧದ ಪ್ರಸಂಗವೊಂದು ಏಳುವದೆಂದು ಇಂದ್ರನಿಗೆ ಗೊತ್ತಾಗಿತ್ತು. ಆದ್ದರಿಂದ ಇಂಥ ಆಯಕಟ್ಟಿನ ಸಮಯದಲ್ಲಿ ಈ ರಾಜನು ಶಸ್ತ್ರಗಳನ್ನು ತ್ಯಜಿಸುವದು ಇಂದ್ರನ ಮನಸಿಗೆ ಎಳ್ಳಷ್ಟೂ ಬಂದಿರಲಿಲ್ಲ. ಮುಂದೆ ಜರುಗಲಿರುವ ಯುದ್ಧದಲ್ಲಿ ಇಂದ್ರನಿಗೆ ಪುರೂರವನ ಸಹಾಯವು ಅಗತ್ಯವಾಗಿ ಬೇಕಾಗಿತ್ತು. ಹೀಗಿರುವಾಗ ಪುರೂರವನಂಥ ಮಹಾಪರಾಕ್ರಮಿ ರಾಜನು ತಪೋವನಕ್ಕೆ ತೆರಳುವದು ಅಯೋಗ್ಯವೆಂದು ಇಂದ್ರನು ಭಾವಿಸಿದನು. ಊರ್ವಶಿಯ ಸಲುವಾಗಿಯೇ ರಾಜನು ತಪೋವನಕ್ಕೆ ಹೊರಡುವ ಮನಸ್ಥಿತಿಯಲ್ಲಿರುತ್ತಾನೆ. ಆದಕಾರಣ ಅವಳನ್ನೇ ಅವನಿಗೆ ಕೊಟ್ಟುಬಿಟ್ಟರೆ ಅವನ ನಿರ್ಧಾರವು ನಿಂತುಹೋಗುವದೆಂದು ಕಲ್ಪಿಸಿ ಇಂದ್ರನು ರಾಜನನ್ನು ಸಮಾಧಾನಪಡಿಸಲು ಆ ಕ್ಷಣವೇ ನಾರದ ಋಷಿಯನ್ನು ಅವನ ಕಡೆಗೆ ಕಳುಹಿಕೊಟ್ಟನು.

ಇತ್ತ ರಾಜನು ತಪೋವನಕ್ಕೆ ಹೊರಡುವ ಸಿದ್ಧತೆ ನಡೆದಿರುವಾಗ ಆಕಾಶದಲ್ಲಿ ಮಿಂಚು ಹೊಡೆದಂತೆ ಒಂದು ದಿವ್ಯ ಪ್ರಕಾಶವು ಬೆಳಗಹತ್ತಿ ಎಲ್ಲರ ಕಣ್ಣುಗಳು ಕುಕ್ಕಿಹೋದವು. ರಾಜನು ಮೇಲೆತ್ತಿ ನೋಡಲಾಗಿ ಅದೊಂದು ಮಿಂಚೇ ಎಂದು ಅವನಿಗೆ ಮೊದಲಿಗೆ ಭಾಸವಾಯಿತು. ಆದರೆ ಲಕ್ಷ್ಯಪೂರ್ವಕವಾಗಿ ನೋಡಿದೊಡನೆ ಭಗವಾನ್ ನಾರದಋಷಿಯೇ ಬರುತ್ತಿದ್ದಾನೆ; ಆದರಿಂದ ಈ ಪ್ರಕಾಶವು ಬೆಳಗುತ್ತಲಿದೆ ಎಂದು ಅವನಿಗೆ ಕಂಡುಬಂದಿತು. ರಾಜನು ನಾರದನನ್ನು ಕಂಡು 'ಕಸೂತಿಯಲ್ಲಿ ಬಂಗಾರದ ಎಳೆಯು ಹೊಳೆಯುವಂತೆ ಯಾರ ಜಟೆಗಳು ಹೊಳೆಯುತ್ತಿರುವವೋ, ಚಂದ್ರಕಲೆಯಷ್ಟು ಶುಭ್ರವಾಗಿರುವ ಯಜ್ಞೋಪವೀತವನ್ನು ಯಾರು ಧರಿಸಿರುವರೋ, ಮುತ್ತಿನ ಹಾರಕ್ಕಿಂತಲೂ ಹೆಚ್ಚಾಗಿ ಪ್ರಕಾಶಿಸಿ ಸುಂದರವಾಗಿ ಕಾಣಿಸುವರೋ ಲೋಕದ ಜನರ ಮನೋರಥವನ್ನು ಪೂರ್ಣಮಾಡುವಂಥ ಈ ನಡೆದಾಡುವ, ಮಾತನಾಡುವ ಕಲ್ಪವೃಕ್ಷವೇ ಏನೋ ಅನ್ನುವಂತೆ ಭಾಸವಾಗುತ್ತಿದೆ' ಎಂದೆಂದನು.

ರಾಜನು ಹೀಗೆ ವರ್ಣಿಸುತ್ತಿರುವಷ್ಟರಲ್ಲಿ ಆ ನಾರದನು ಆಕಾಶದಿಂದಿಳಿದು ರಾಜನ ಸಮೀಪದಲ್ಲಿಯೇ ಬಂದನು. ಅವನನ್ನು ಕಂಡೊಡನೆ 'ಪೂಜಾ ಸಾಮಗ್ರಿಗಳು ಬರಲಿ, ಪೂಜಾಸಾಮಗ್ರಿಗಳು ಬರಲಿ' ಎಂದು ರಾಜನು ಕೂಗಿದನು. ಉರ್ವಶಿಯೇ ಲಗುಬಗೆಯಿಂದ ಪೂಜಾಸಾಹಿತ್ಯವನ್ನು ತಂದು ಕೊಟ್ಟಳು. ಆಗ ರಾಜನು ಪ್ರೇಮಾದರ ಪೂರ್ವಕವಾಗಿ ನಾರದನನ್ನು ಪೂಜಿಸಿ ನಮಸ್ಕರಿಸಿದನು. ನಾರದನು ಅವನಿಗೆ ಆಶೀರ್ವಾದ ಮಾಡಿದನು. ಆ ಮೇಲೆ ಉರ್ವಶಿಯು ನಮಸ್ಕರಿಸಲು ನಾರದನು 'ನೀವಿಬ್ಬರೂ ದಂಪತಿಗಳು ಒಟ್ಟಾಗಿದ್ದುಕೊಂಡು ಬಹುದಿನಗಳವರೆಗೆ ಸುಖಾನುಭವವನ್ನು ಪಡೆಯಿರಿ' ಎಂದು ಆಶೀರ್ವಾದ ಮಾಡಿದನು.

ಉರ್ವಶಿಯು ಸ್ವರ್ಗಲೋಕಕ್ಕೆ ಹೊರಟು ನಿಂತ ಹೊತ್ತಿನಲ್ಲಿ ನಾರದನ ಮುಖದಿಂದ ಹೊರಬಂದ ಆಶೀರ್ವಾದ ವಚನವನ್ನು ಕೇಳಿ ರಾಜನು ಈ ಋಷಿಯ ಮುಖದಿಂದ ಸುಳ್ಳು ಮಾತುಗಳೆಂದಿಗೂ ಬರುವದಿಲ್ಲ. ಆದುದರಿಂದ ಅವನು ಅಂದಂತೆ ಯಾಕಾಗಬಾರದೆಂದುಕೊಂಡು 'ಆಯುವೇ, ನಾರದರಿಗೆ ನಮಸ್ಕರಿಸು' ಎಂದು ಸೂಚಿಸಿದನು.

ಆಯುವು ಮುಂದೆ ಬಂದು 'ಭಗವಾನ್ ನಾರದರೇ, ಉರ್ವಶಿಯ ಮಗನಾದ ನಾನು—ಆಯುವು ನಿಮಗೆ ವಂದಿಸುತ್ತೇನೆ' ಎಂದೆನ್ನಲು ನಾರದರು 'ಆಯುಷ್ಮಂತನಾಗು' ಎಂದು ಹರಕೆಯಿತ್ತರು. ಆ ಮೇಲೆ ನಾರದರು ಆಸನಾರೂಢರಾಗಲು ಉಳಿದವರೂ ಅವನ ಅಣತಿಯಂತೆ ತಮ್ಮ ತಮ್ಮ ಆಸನಗಳಲ್ಲಿ ಮಂಡಿಸಿದರು. ಆಗ ರಾಜನು ನಮಸ್ಕರಿಸಿ ವಿನಯಪೂರ್ವಕವಾಗಿ 'ನಾರದರೇ, ತಮ್ಮ ಆಗಮನವು ನಿಷ್ಕಾರಣವೆಂದಿಗೂ ಇರಲಾರದು. ಆದ ಕಾರಣ ತಾವು ಇಲ್ಲಿಗೆ ಬಂದ ಕಾರಣವನ್ನು ತಿಳಿಯಲಪೇಕ್ಷಿಸುತ್ತೇನೆ' ಎಂದು ಬೇಡಿಕೊಂಡನು.

ನಾರದನು 'ರಾಜನೇ, ಇಂದ್ರನ ನಿರೋಪವನ್ನು ಹೇಳಲು ಬಂದಿರುವೆನು. ಅದನ್ನು ಕೇಳು. ನೀನು ಅರಣ್ಯಕ್ಕೆ ಹೊರಟಿರುವದನ್ನು ಇಂದ್ರನು ತನ್ನ ದೈವೀಪ್ರಭಾವದಿಂದ ತಿಳಿದುಕೊಂಡು ಆಜ್ಞೆಯನ್ನು ಮಾಡಿರುವದೇನೆಂದರೆ—ಭೂತ, ವರ್ತಮಾನ, ಭವಿಷ್ಯಕಾಲಗಳಲ್ಲಿ ಏನೇನು ಸಂಭವಿಸಬಹುದೋ ಅದೆಲ್ಲವನ್ನೂ ತಿಳಿದಿರುವಂಥ ಋಷಿಗಳು ದೇವ–ದೈತ್ಯರಲ್ಲಿ ಬೇಗನೆ

ಯುದ್ಧವು ಆಗುವದೆಂದು ಇಂದ್ರನಿಗೆ ಹೇಳಿದರು. ಯುದ್ಧ ಪ್ರಸಂಗದಲ್ಲಿ ನೀನು ಅವನಿಗೆ ಪೂರ್ಣ ಸಹಾಯವನ್ನು ಕೊಡತಕ್ಕವನು. ಇಂಥ ಹೊತ್ತಿನಲ್ಲಿ ನೀನು ಶಸ್ತ್ರಾಸ್ತ್ರಗಳನ್ನು ಬಿಸುಟಿ, ವಲ್ಕಲಧಾರಿಯಾಗಿ ಅರಣ್ಯಕ್ಕೆ ಹೋಗಬಾರದೆಂದು ಇಂದ್ರನ ಇಚ್ಛೆಯಾಗಿದೆ. ಈ ಉರ್ವಶಿಯು ನೀನು ಜೀವಿಸುವವರೆಗೆ ನಿನ್ನ ಸಹಧರ್ಮಿಣಿಯಾಗಿ ಉಳಿಯುವಳು—ಎಂದು ಇಂದ್ರನು ಅವಳಿಗೆ ಆಜ್ಞೆಯನ್ನು ಮಾಡಿದ್ದಾನೆ.' ಎಂದು ಹೇಳಿದನು.

ಉರ್ವಶಿಗಂತೂ ಬೇಕಾದುದು ಇಷ್ಟೇ ಆಗಿತ್ತು. ಇಂದ್ರನ ಆಜ್ಞೆಯನ್ನು ಕೇಳಿ ಅವಳ ಆನಂದವು ಮುಗಿಲನ್ನು ಮುಟ್ಟಿತು. 'ನನ್ನ ಹೃದಯದಲ್ಲಿಯ ಮುಳ್ಳನ್ನೇ ಕಿತ್ತುಬಿಟ್ಟಂತಾಯಿತು' ಎಂದು ಅವಳು ತನ್ನಲ್ಲಿಯೇ ಗುಣಗುಟ್ಟಿಕೊಂಡಳು. ರಾಜನೂ ಸಂತುಷ್ಟನಾಗಿ 'ಇಂದ್ರನು ನನ್ನ ಮೇಲೆ ದೊಡ್ಡದೊಂದು ಉಪಕಾರವನ್ನೇ ಮಾಡಿದ್ದಾನೆ' ಎಂದಂದುಕೊಂಡನು.

ನಾರದನು 'ಅವನು ಯೋಗ್ಯವಾದುದನ್ನೇ ಮಾಡಿದ್ದಾನೆ. ನಿನ್ನ ಕೆಲಸವನ್ನು ಅವನು ಮಾಡಬೇಕು. ಅವನ ಇಷ್ಟವನ್ನು ನೀನು ಪೂರೈಸಬೇಕು. ಸೂರ್ಯನು ತನ್ನ ತೇಜದಿಂದ ಅಗ್ನಿಯನ್ನು ಬೆಳಗಿಸುತ್ತಾನೆ. ಮತ್ತು ಅಗ್ನಿಯು ಸೂರ್ಯನನ್ನು ಬೆಳಗಿಸುತ್ತಾನೆ—ಎಂಬ ರೀತಿಯಲ್ಲಿ ನಿಮ್ಮಿಬ್ಬರ ಸಂಬಂಧವಿದೆ' ಎಂದು ನುಡಿದನು.

ಪುರೂರವರಾಜನು ಆಯುವಿಗೆ ಪಟ್ಟಕಟ್ಟುವದು ಇಂದ್ರನ ಮನಸ್ಸಿಗೆ ಬಂದಿರಲಿಲ್ಲ. ಆದ್ದರಿಂದ ಅವನಿಗೆ ಯೌವರಾಜ್ಯಾಭಿಷೇಕವನ್ನು ಮಾಡಬೇಕೆಂದು ಇಂದ್ರನು ನಾರದರ ಸಂಗಡ ಎಲ್ಲ ಸಿದ್ಧತೆಯನ್ನು ಮಾಡಿಯೇ ಕಳಿಸಿದ್ದನು. ರಂಭೆಯೆಂಬ ಅಪ್ಸರೆಯು ಸರ್ವ ಸಾಮಗ್ರಿಯೊಂದಿಗೆ ಆಕಾಶದಲ್ಲಿ ಸಿದ್ಧಳಾಗಿಯೇ ನಿಂತಿದ್ದಳು. ಆಗ ನಾರದನು 'ರಂಭೆಯೇ, ಮಂತ್ರಗಳಿಂದ ಅಭಿಮಂತ್ರಿತವಾದ ಯೌವರಾಜ್ಯಾಭಿಷೇಕದ ಸಾಹಿತ್ಯಗಳನ್ನು ತೆಗೆದುಕೊಂಡು ಇತ್ತ ಬಾ' ಎಂದು ಹೇಳಿದನು.

ನಾರದನ ಆಜ್ಞೆಯಂತೆ ರಂಭೆಯು ಸರ್ವ ಸಾಮಗ್ರಿಗಳನ್ನು ತಂದು ನಾರದನ ಮುಂದಿರಿಸಿದಳು. ನಾರದನು ಆಯುವನ್ನು ರತ್ನಖಚಿತ ಆಸನದಲ್ಲಿ ಕುಳ್ಳಿರಿಸಿ, ಸ್ವತಃ ತನ್ನ ಕೈಗಳಿಂದಲೇ ಅಭಿಮಂತ್ರಿಸಿದ ಸುವರ್ಣಕಲಶದ ನೀರನ್ನು ಆಯುವಿನ ತಲೆಯ ಮೇಲೆ ಹಾಕಿದನು. ಅಭಿಷೇಕದ ಮುಖ್ಯ

ವಿಧಿಯನ್ನೆಷ್ಟು ನಾರದನು ತಾನೇ ಮಾಡಿ, ಇನ್ನುಳಿದ ಶಿಷ್ಟಾಚಾರಗಳನ್ನು ರಂಭೆಗೆ ಮಾಡಲು ಹೇಳಿದನು. ಆ ಪ್ರಕಾರ ರಂಭೆಯು ವಿಧಿಪೂರ್ವಕವಾಗಿ ಪೂರೈಸಿ, 'ಆಯುವೇ, ನಾರದರಿಗೂ, ನಿನ್ನ ತಾಯಿತಂದೆಗಳಿಗೂ ನಮಸ್ಕರಿಸು' ಎಂದು ಸೂಚಿಸಿದಳು.

ಅದನ್ನು ಕೇಳಿ ಆಯುವು ಎಲ್ಲರಿಗೂ ನಮಸ್ಕಾರವನ್ನು ಮಾಡಿದನು. ನಾರದರು 'ವತ್ಸನಿಗೆ ಕಲ್ಯಾಣವಾಗಲಿ' ಎಂದೂ, ರಾಜನು 'ಕುಲಧುರಂಧರನಾಗು ಎಂದೂ, ಉರ್ವಶಿಯು 'ಪಿತಾಜ್ಞಾಪರಿಪಾಲಿಸುವವನಾಗು' ಎಂದೂ ಆಶೀರ್ವದಿಸಿದರು. ಅಷ್ಟರಲ್ಲಿ ಇಬ್ಬರು ಬಟ್ಟಂಗಿಗಳು ಬಂದು ಸಂಪ್ರದಾಯಾನುಸಾರವಾಗಿ ಯುವರಾಜ ಆಯುವಿಗೆ ನಮಸ್ಕಾರಗಳನ್ನು ಸಲ್ಲಿಸಿದರು.

ಅವರಿಬ್ಬರಲ್ಲಿ ಒಬ್ಬ ಬಟ್ಟಂಗಿಯು 'ದೇವಮುನಿ ಅತ್ರಿಋಷಿಗಳಿಗೆ ಚಂದ್ರನೂ, ಚಂದ್ರನಿಗೆ ಬುಧನೂ, ಬುಧನಿಗೆ ಪುರೂರವನೂ ಅನುರೂಪವಾದಂತೆ ನೀವಾದರೂ ಲೋಕೋತ್ತರ ಗುಣಗಳಿಂದ ಮಂಡಿತರಾಗಿ ಹಿರಿಯರ ಅನುಕರಣವನ್ನು ಮಾಡಬೇಕು. ಲೋಕದಲ್ಲಿಯೇ ಸರ್ವಶ್ರೇಷ್ಠವಾದ ತಮ್ಮ ವಂಶದ ಮೇಲೆ ಎಲ್ಲರ ಆಶೀರ್ವಾದವು ಪೂರ್ಣವಾಗಿಯೇ ಇದೆ. ಹೀಗಿದ್ದು ನಾನೇನು ಹೆಚ್ಚಿಗೆ ಆಶೀರ್ವದಿಸುವದಿದೆ' ಎಂದನು.

ಎರಡನೆಯವನು 'ಶ್ರೇಷ್ಠ ಜನರಲ್ಲಿ ಪರಮ ಶ್ರೇಷ್ಠನಾದ ನಿಮ್ಮ ತಂದೆ ನಿಶ್ಚಲ ಧೈರ್ಯವುಳ್ಳವರಾದ ನಿಮ್ಮಲ್ಲಿ ವಿಭಾಗಿಸಲ್ಪಟ್ಟ ಈ ರಾಜ್ಯಲಕ್ಷ್ಮಿಯು ಸದ್ಯಕ್ಕೆ ಹಿಮಾಚಲ ಮತ್ತು ಸಮುದ್ರಗಳಲ್ಲಿ ಯಾವುದರ ನೀರು ವಿಭಾಗಿಸಲ್ಪಟ್ಟಿದೆಯೋ ಅಂಥ ಭಾಗೀರಥಿಯ ಹಾಗೆ ಹೆಚ್ಚಾಗಿ ಶೋಭಿಸುತ್ತದೆ' ಎಂದಂದನು.

ರಂಭೆಯು 'ಉರ್ವಶೀ ನಿನ್ನ ಮಗನಿಗೆ ಯೌವರಾಜ್ಯಾಭಿಷೇಕವಾದುದನ್ನು ಕಂಡು ಮತ್ತು ನಿನ್ನ ಗಂಡನಿಗೆ ವಿರಹವಾಗುವ ಪ್ರಸಂಗ ತಪ್ಪಿದುದನ್ನು ನೋಡಿ ನೀನು ಸುಖಿಯಾದಿ ಎಂದು ನನಗೆ ಬಹಳ ಸಮಾಧಾನವೆನಿಸುತ್ತದೆ' ಎಂದಳು.

ಉರ್ವಶಿಯು ರಾಜನಿಗೆ ಅತ್ಯಂತ ಪ್ರೀತಿಯುಳ್ಳವಳಾಗಿದ್ದಳು. ಅವಳಿಗೆ ವಿಶೇಷವಾಗಿ ಮಾನಸನ್ಮಾನಗಳು ಸಲ್ಲುತ್ತಿದ್ದವು. ಆದರೂ ಅವಳು ವಸುಮತಿಯ ಸ್ಥಾನಕ್ಕೆ ಸ್ವಲ್ಪವೂ ಅಪಮಾನವಾಗದಂತೆ ವರ್ತಿಸುತ್ತಿದ್ದಳಲ್ಲದೆ

ಅವಳೊಡನೆ ಬಹು ವಿನಯಪೂರ್ವಕವಾಗಿ ನಡೆದುಕೊಳ್ಳುತ್ತಿದ್ದಳು. ಆದ್ದರಿಂದ ಉರ್ವಶಿಯು ಈ ಹೊತ್ತಿನಲ್ಲಿ ಅವಳಿಗೆ ತಕ್ಕ ಸನ್ಮಾನವು ಸಲ್ಲಬೇಕೆಂದು ಬಗೆದು ವಸುಮತಿರಾಣಿಗೆ ನಮಸ್ಕರಿಸಿ ಬರಬೇಕೆಂದು ಆಯುವಿಗೆ ಹೇಳಿದಳು.

ರಾಜನು ಉರ್ವಶಿಯಲ್ಲಿ ಅನುರಕ್ತನಾಗಿದ್ದರೂ ಅವನು ರಾಣಿಯನ್ನು ಎಂದೂ ಅಪಮಾನಗೊಳಿಸಿದ್ದಿಲ್ಲ. ಉರ್ವಶಿಯು ಆಯುವಿಗೆ ಹೇಳಿದ ಮಾತುಗಳನ್ನು ಕೇಳಿಕೊಂಡು ಅವನು ' ಸ್ವಲ್ಪ ತಡೆ. ನಾವೆಲ್ಲರೂ ಅವಳ ಭೆಟ್ಟಿಗಾಗಿ ಹೋಗೋಣ ' ವೆಂದಂದನು.

ನಾರದನು ' ರಾಜನೇ, ಈ ನಿನ್ನ ಮಗನಿಗೆ ಯೌವರಾಜ್ಯಾಭಿಷೇಕವಾದುದನ್ನು ಕಂಡು ಇಂದ್ರನು ಶತ್ರುವಿನ ಮೇಲೆ ಹಲ್ಲೆಯನ್ನು ಪ್ರಾರಂಭಿಸಲು ಕಾರ್ತಿಕ ಸ್ವಾಮಿಗೆ ಅಭಿಷೇಕ ಮಾಡಿದುದರ ನೆನಪು ನನಗೀಗ ಆಗುತ್ತಲಿದೆ ' ಎಂದನು.

ರಾಜನು ' ಭಗವಾನ ನಾರದರೇ, ಇಂದ್ರನು ನನ್ನ ಮೇಲೆ ಸರ್ವವಿಧದಿಂದಲೂ ಅನುಗ್ರಹಿಸಿದ್ದಾನೆ ' ಎಂದನು.

ನಾರದನು ' ಇಂದ್ರದೇವನು ನಿನಗೆ ಇನ್ನೇನಾದರೂ ದಯಪಾಲಿಸಬೇಕೆಂದು ನಿನ್ನ ಇಚ್ಛೆ ಇದೆಯೋ ?' ಎಂದು ವಿಚಾರಿಸಿದನು.

ರಾಜನು ' ಇದಕ್ಕೂ ಹೆಚ್ಚಿಗೆ ಇನ್ನೇನಪೇಕ್ಷಿಸುವದಿದೆ ? ಆದರೂ ನನ್ನ ಮೇಲೆ ಇನ್ನೂ ಕೃಪೆಯನ್ನು ತೋರಿಸಬೇಕೆಂದು ದೇವರಾಜನ ಇಚ್ಛೆಯಿದ್ದರೆ ಪರಸ್ಪರರಲ್ಲಿ ವಿರೋಧವುಳ್ಳ, ಒಂದೇ ಸ್ಥಳದಲ್ಲಿ ವಾಸಿಸಲು ಅಸಕ್ಯವಾದಂಥ ಲಕ್ಷ್ಮಿ-ಸರಸ್ವತಿಯರ ವಾಸ್ತವ್ಯವು ಸಜ್ಜನರ ಲೋಕಕಲ್ಯಾಣಾರ್ಥವಾಗಿ ಒತ್ತಟ್ಟಿಗಿರುವಂತೆ ಆಗಲಿ ! ಸರ್ವ ಪ್ರಾಣಿಮಾತ್ರಗಳು ಸಂಕಟದಿಂದ ಪಾರಾಗಲಿ ! ಸರ್ವರಿಗೂ ಕಲ್ಯಾಣವಾಗಲಿ ! ಸರ್ವರ ಮನೋರಥವು ಪೂರ್ಣವಾಗಲಿ ! ಎಲ್ಲರೂ ಆನಂದವನ್ನು ಹೊಂದಲಿ !' ಎಂದು ಪ್ರಾರ್ಥಿಸಿಕೊಂಡನು.

---

# ಉಪಸಂಹಾರ

ಈ ಪ್ರಕಾರವಾಗಿ ರಾಜನು ಬೇಡಿಕೊಳ್ಳಲು 'ಹಾಗೆಯೇ ಆಗಲಿ' ಎಂದು ನಾರದರು ಅವರ ನಿರೋಪವನ್ನು ತೆಗೆದುಕೊಂಡು ರಂಭೆ ಸಹಿತವಾಗಿ ಸ್ವರ್ಗಕ್ಕೆ ತೆರಳಿದರು. ಆಮೇಲೆ ರಾಜನು ಪತ್ನಿ-ಪುತ್ರರನ್ನು ಕೂಡಿಕೊಂಡು ಅಂತರ್‍ಗೃಹಕ್ಕೆ ಹೋದನು. ಉರ್ವಶಿಯ ಆಜ್ಞೆಯಂತೆ ಆಯುವು ವಸುಮತಿ ರಾಣಿಗೆ ನಮಸ್ಕರಿಸಿದನು. ಅವಳು ಹೊಟ್ಟೆಯ ಮಗನಂತೆ ಅವನನ್ನು ಕಂಡು ಕೊಂಡು ಪ್ರೇಮಪೂರ್ವಕವಾಗಿ ಅವನ ನಮಸ್ಕಾರಗಳನ್ನು ಸ್ವೀಕರಿಸಿದಳು.

ಉರ್ವಶಿಯು ಹೇಳಿದಂತೆ ರಾಜನು ಕುಣಿಯುತ್ತಿದ್ದನು. ಆದರೂ ಉರ್ವಶಿಯು ಇನ್ನುಳಿದ ಅಂಗವಸ್ತ್ರಗಳಂತಿರಲಿಲ್ಲ. ಅವಳು ರಾಜನ ಧರ್ಮ ಪತ್ನಿಯೇ ಆಗಿದ್ದಳು. ವೇಶ್ಯೆಯರಂತೆ ತೋರಿಕೆಯ ಪ್ರೇಮವನ್ನು ತೋರಿ ಸುತ್ತ, ಯಾವುದೇ ರೀತಿಯಿಂದ ತನ್ನ ಬಲಿಯಲ್ಲಿ ಬಿದ್ದ ಪುರುಷನನ್ನು ವಂಚಿಸಿ, ಬೇರೊಬ್ಬನನ್ನು ಸ್ವಾಧೀನಪಡಿಸಿಕೊಳ್ಳುವ ಇತ್ಯಾದಿ ಯಾವ ಸ್ವಭಾವ ಸಿದ್ಧ ದುರ್ಗುಣಗಳು ಉರ್ವಶಿಯಲ್ಲಿರಲೇ ಇಲ್ಲವೆಂದಲ್ಲ. ಆದರೂ ರಾಜನ ಮೇಲೆ ಮಾತ್ರ ಅವಳು ಪ್ರಯೋಗ ಮಾಡಲಿಲ್ಲ. ವಿವಾಹಿತ ಸ್ತ್ರೀಗಿಂತಲೂ ಅವಳು ರಾಜನಲ್ಲಿ ಅನುರಕ್ತಳಾಗಿದ್ದಳು. ಧರ್ಮಪತ್ನಿ ಯಂತೆಯೇ ಅವಳು ವರ್ತಿಸುತ್ತಿಳು. ಆದ್ದರಿಂದ ವಸುಮತಿರಾಣಿಗೆ ಯಾವ ರೀತಿಯಿಂದಲೂ ಅಸಮಾಧಾನವೆನಿಸಿದ್ದಿಲ್ಲ. ಅವಳನ್ನು ತನ್ನ ಒಡಹುಟ್ಟಿದ ತಂಗಿಯೆಂದೇ ಅವಳು ಭಾವಿಸಿದ್ದಳು. ಉರ್ವಶಿಯು ಇಂದು ಹೋಗುವವ ಳಿದ್ದಳು. ಆದರೆ ಇನ್ನು ಮುಂದೆ ಆಮರಣಪರ್ಯಂತ ಇಲ್ಲಿಯೇ ಇರುವವ ಳೆಂಬುದನ್ನು ಕೇಳಿ ರಾಣಿಗೆ ಬಹಳ ಸಂತೋಷವಾಯಿತು.

ಆಯುವು ಉರ್ವಶಿಯ ಮಗನಾದರೂ ಅವನೇ ಯುವರಾಜನಾ ದ್ದನು. ಮುಂದೆ ಅವನೇ ರಾಜನೂ ಆಗುವವನೆಂದು ವಸುಮತಿರಾಣಿಗೆ ಎಳ್ಳಷ್ಟೂ ಕೆಡುಕೆನಿಸಿರಲಿಲ್ಲ. ಹೊಟ್ಟೆಯ ಮಗನಿಗೆ ಈ ಮಹಾಭಾಗ್ಯವು ಪ್ರಾಪ್ತವಾದಾಗ ಯಾವ ಆನಂದವಾಗಬಹುದಾಗಿತ್ತೋ ಅಷ್ಟು ಆನಂದವು ಅವಳಿಗೂ ಆಗಿತ್ತು. ಇವಳಂತೆ ಇನ್ನುಳಿದ ರಾಣೀವಾಸದಲ್ಲಿರತಕ್ಕ ಸ್ತ್ರೀಯರಿಗೂ ಆ ದಿನವು ಆನಂದದಾಯಕವಾಗಿ ಪರಿಣಮಿಸಿತು.

ರಾಜನಿಗೆ ಉರ್ವಶಿಯ ವಿಯೋಗದ ಚಿಂತೆಯು ಈಗ ದೂರವಾಗಿದ್ದ ರಿಂದ ಅವನು ಬಹು ಆನಂದದಿಂದಿರತೊಡಗಿದನು. ದಿನದಿನಕ್ಕೆ ಅವನು ರಾಜ್ಯ ಕಾರಭಾರದಲ್ಲಿ ವಿಶೇಷ ಲಕ್ಷ್ಯಕೊಡತೊಡಗಿದನು. ರಾಜ್ಯಭಾರವನ್ನು ಇಷ್ಟು ದಿನಗಳವರೆಗೆ ಅವನೊಬ್ಬನೇ ಹೊರಬೇಕಾಗಿತ್ತು. ಆದರೆ ಈಗ ಆಯುವು ಯುವರಾಜನಾದ್ದರಿಂದ ಅವನಿಗೆ ಮತ್ತೊಬ್ಬ ಪಾಲುಗಾರನು ದೊರಕಿದಂತಾಗಿ ಅವನ ಹೊರೆಯು ಸ್ವಲ್ಪ ಕಡಮೆಯಾಗಿತ್ತು.

ವಯಸು ಆದಹಾಗೆ ಅವನ ಶಕ್ತಿಯೂ ಕುಂದುತ್ತ ನಡೆಯುತ್ತದೆ; ವಿಷಯ ಸೇವನೆಯಲ್ಲಿಯ ಆಸಕ್ತಿಯೂ ಕಡಮೆಯಾಗುತ್ತದೆ. ಆದರೆ ಇದು ಪುರೂರವನಿಗೆ ಅನ್ವಯಿಸಿದ್ದಿಲ್ಲ. ಅವನ ಪ್ರಭಾವವೂ ಸಾಮರ್ಥ್ಯವೂ ಅಲೌಕಿಕವಾದುದರಿಂದ ಅವನಿಗೆ ಅಶಕ್ತತೆಯೂ ದಣಿವೂ ಬಂದಿರಲಿಲ್ಲ. ಅವನ ವಿಷಯ ಸೇವನೆಯ ಶಕ್ತಿಯು ಕೊನೆಯವರೆಗೂ ಎಷ್ಟು ಕ್ಷೀಣವಾಗಲಿ ಇಲ್ಲ. ವಿಷಯ ವಾಸನೆಯು ಬಹಳ ವಿಲಕ್ಷಣವಾಗಿರುತ್ತದೆ. ಪ್ರಾಣೋತ್ಕ್ರಮಣ ಸಮಯ ಬಂದರೂ ಲೋಭವು ಎಂದಿಗೂ ಬಿಡುವದಿಲ್ಲ. ಹೀಗಿದ್ದರೂ ಇಳಿವಯಸಿನಲ್ಲಿ ಪುರುಷನಿಗೆ ಉತ್ಕಟೇಚ್ಛೆಯು ಮಾತ್ರ ಇರುತ್ತದೆ. ಆದರೆ ಅವನ ಕೈಯಿಂದ ಮಾತ್ರ ಏನೂ ಆಗುವದಿಲ್ಲ. ಆದರೆ ಪುರೂರವನದು ಮಾತ್ರ ಹಾಗಲ್ಲ. ಆಹಾರ ವಿಹಾರಾದಿ ವ್ಯಾಪಾರಗಳೆಲ್ಲವೂ ಯಥಾಪ್ರಕಾರ ವಾಗಿ ಸಾಗಿದ್ದವು.

ಹೀಗೆ ಸುಖಸಾಗರದಲ್ಲಿ ಈಸಾಡುತ್ತಿರುವ ಪುರೂರವರಾಜನು ಎಷ್ಟೋ ವರುಷಗಳವರೆಗೆ ಐಹಿಕ ಸುಖವನ್ನನುಭವಿಸಿದನು. ನಾರದರು ಒಡನುಡಿದಂತೆ ದೇವದೈತ್ಯರಲ್ಲಿ ಯುದ್ಧದ ಪ್ರಸಂಗವು ತಲೆದೋರಿತು. ಅದರಲ್ಲಿ ಪುರೂರವನು ಸೇನಾಪತಿಯಾಗಿ ಇಂದ್ರನ ಕಡೆಗೆ ಸೇರಿ ಶತ್ರುಗಳೊಡನೆ ಹೋರಾಡಿದನು. ಆಗ ಆಯುವು ಪ್ರತಿಷ್ಠಾನದಲ್ಲಿ ರಾಜ್ಯದ ಅಧಿಕಾರವನ್ನು ಹೊತ್ತು ಸಾಗಿಸುತ್ತಿದ್ದನು. ದೇವದೈತ್ಯರ ಯುದ್ಧವು ಬಹಳ ಕಾಲದ ವರೆಗೆ ನಡೆಯಿತು. ಕೊನೆಗೆ ಅಸಂಖ್ಯ ದೈತ್ಯರ ಸಂಹಾರವಾದುದನ್ನು ಕಂಡು ಕಶ್ಯಪಋಷಿಯು ಮಧ್ಯಸ್ತಿಕೆಯನ್ನು ವಹಿಸಿ ದೇವತೆಗಳನ್ನು ಶಾಂತಗೊಳಿಸಿದನು. ದೈತ್ಯರನ್ನು ಪಾತಾಳಕ್ಕೆ ಅಟ್ಟಿಬಿಟ್ಟನು. ಈ ಯುದ್ಧದಲ್ಲಿ ಇಂದ್ರನಿಗೆ ಜಯವಾಯಿತು. ಇದರಲ್ಲಿ

ಪುರೂರವನು ಇಂದ್ರನಿಗೆ ಬಹಳ ಸಹಾಯವಾದುದರಿಂದ ಇಂದ್ರನು ಅವನಿಗೆ ತನ್ನ ಕೃತಜ್ಞತೆಯನ್ನು ಸಲ್ಲಿಸಿದನು.

ಜನ್ಮ ಧರಿಸಿದ ಪ್ರಾಣಿಯು ಶಕ್ತಿಯು ಎಷ್ಟೇ ದೊಡ್ಡದಿದ್ದರೂ ಅವನ ಪ್ರಭಾವವು ಎಷ್ಟು ಬೇಕಾದಷ್ಟಿದ್ದರೂ ಸರ್ವರನ್ನು ಸಂಹರಿಸುವ ಕಾಲನ ಮುಂದೆ ಏನೂ ಮಾಡಲಾರವು. ಅವನ ಪ್ರಭಾವವು ಮಾತ್ರ ಜನ್ಮಧರಿಸಿದ ಇದ್ದವನ ಮೇಲೆ ಯಾವ ರೀತಿಯಿಂದಲೂ ಬೀಳಲಾರದು. ಆದರೆ ಜನ್ಮ ಧಾರಣ ಮಾಡಿದವನು ಎಂಥವನೇ ಇರಲಿ, ಅವನ ಇತಿಶ್ರೀಯನ್ನು ಮಾಡದೆ ಮರಣವು ಎಂದಿಗೂ ಬಿಡುವದಿಲ್ಲ. ಅದರಂತೆ ಪುರೂರವನಾದರೂ ಅವನಿಂದ ಪಾರಾಗುವ ಬಗೆ ಹೇಗೆ ? ಅಂತ್ಯಕಾಲ ಬರುವವರೆಗೆ ಅವನ ಶಕ್ತಿ, ಉತ್ಸಾಹ ಗಳಲ್ಲಿ ಅಂತರವೇ ಬೀಳಲಿಲ್ಲ. ಆದರೂ ಅವನಿಗೆ ದೇಹಾವಸಾನದ ಕಾಲವು ಸಮೀಪಿಸಿತೆಂಬ ಮಾತು ಅವನ ಲಕ್ಷ್ಯದಲ್ಲಿ ಬಾರದೆ ಹೋಗಲಿಲ್ಲ.

ಅಪರಿಹಾರ್ಯವಾದ ಮೃತ್ಯುಕಾಲವು ಬಂದಾಗ ಯಾರು ಉದ್ವಿಗ್ನ ರಾಗದೆ ಯಾರು ಕರ್ತವ್ಯಪರಿಪಾಲನೆಯಲ್ಲಿ ಸಾವಧರಾಗಿರುವರೋ ಅಂಥವರೇ ಧೈರ್ಯಶಾಲಿಗಳಾಗಬಲ್ಲರು. ಪುರೂರವನ ಜನ್ಮವು ಕೃತಯುಗದಲ್ಲಾಗಿದ್ದರೂ, ಅದು ಮುಗಿದು ತ್ರೇತಾಯುಗವು ಬರುವ ಸಂಧಿಕಾಲವಾಗಿತ್ತು. ಕೃತಯುಗ ದಲ್ಲಿ ಮನುಷ್ಯನು ಬಹುತರವಾಗಿ ಶಾಂತನೂ ಮತ್ತು ವಿಷಯಾಭಿಲಾಷೆಯನ್ನು ಮಾಡದವನೂ, ಮೋಕ್ಷಮಾರ್ಗದಲ್ಲಿ ತತ್ಪರನಾದವನೂ ಆಗಿದ್ದನು. ಆದರೆ ಕಾಲವು ಬದಲಾದ್ದರಿಂದ ಪುರೂರವನ ಮನಸಿನಲ್ಲಿ ವಿಷಯೋಪಭೋಗದ ಇಚ್ಛೆಯು ವೃದ್ಧಿಯಾಗುತ್ತಲೇ ಇತ್ತು. ವಾಸ್ತವಿಕವಾಗಿ ಅವನು ವಿಷಯ ಸುಖದಲ್ಲಿ ನಿರಿಚ್ಛನಾಗಬಹುದಿತ್ತು, ಆದರೆ ತ್ರೇತಾಯುಗವು ಬರುವದಿದ್ದರೂ ಅವನ ಮನಸಿನಲ್ಲಿ ವಿರಕ್ತತೆಯು ಉಂಟಾಗಲಿಲ್ಲ. ಅನೇಕ ಕರ್ಮಗಳನ್ನು ಮಾಡಬೇಕು, ಅಕ್ಷಯ ಸುಖವನ್ನು ದೊರಕಿಸಬೇಕು, ಶಾಶ್ವತವಾಗಿ ಐಷಾ ರಾಮದಲ್ಲಿ ಕಾಲಕಳೆಯಬೇಕು ಎಂದು ಮೊದಲಾಗಿ ಪುರೂರವನ ಇಚ್ಛೆ ಯಾಗಿತ್ತು. ಇಹಲೋಕದಲ್ಲಿ ಅವನು ಇಷ್ಟು ಸುಖವನ್ನು ಭೋಗಿಸಿದ್ದರೂ ಅವನ ವಾಸನೆಯು ತೃಪ್ತಿಹೊಂದಿರಲಿಲ್ಲ.

ಮೃತ್ಯುಕಾಲವು ಸಮೀಪಿಸಿತೆಂದು ಅವನಿಗೆ ತಿಳಿದು ಬಂದಾಗ ತಾನಿನ್ನು ಮರಣಹೊಂದುವವನು; ಮರಣಹೊಂದಿದ ಮೇಲೆ ಉರ್ವಶಿಯ ವಿಯೋಗ

ವಾಗುವದೆಂದೆಸಿಸಿ ಪರಲೋಕದಲ್ಲಿಯೂ ಉರ್ವಶಿಯ ಸಮಾಗಮವು ತಪ್ಪ ಬಾರದೆಂದು ಯತ್ನಿಸಬೇಕೆಂದು ಮಾಡಿದನು. ಹೀಗೆ ಅವನ ಮನಸಿನಲ್ಲಿ ವಿಚಾರ ಬಂದರೂ ತನ್ನ ಉದ್ದೇಶವನ್ನು ಹೇಗೆ ಸಾಧಿಸಿಕೊಳ್ಳಬೇಕೆಂಬ ಮಾರ್ಗವು ಅವನಿಗೆ ಹೊಳೆಯಲಿಲ್ಲ. ಆದ್ದರಿಂದ ಅವನು ' ಉರ್ವಶಿಯೇ, ಇಂದ್ರನ ಆಜ್ಞೆಯಂತೆ ನೀನು ನನ್ನ ಜೀವಮಾನವಿರುವವರೆಗೆ ನನ್ನ ಹತ್ತಿರ ಇದ್ದೇ ಇರುವಿ. ಅದರ ಬಗ್ಗೆ ಯಾವ ಚಿಂತೆಯೂ ನನಗುಳಿದಿರುವದಿಲ್ಲ. ಆದರೆ ದೇಹತ್ಯಾಗವಾದ ಮೇಲೆ ಪರಲೋಕದಲ್ಲಿಯೂ ನಿನ್ನ ಸಹವಾಸವು ನನಗೆ ತಪ್ಪಬಾರದು. ಅದಕ್ಕೆ ಯಾವ ಉಪಾಯವನ್ನು ಮಾಡಬೇಕು ?' ಎಂದು ಅವಳನ್ನು ವಿಚಾರಿಸಿದನು.

ರಾಜನಿಗೆ ಉರ್ವಶಿಯ ಸಮಾಗಮವು ಬೇಕಾದಂತೆ ಉರ್ವಶಿಗೆ ರಾಜನ ಸಮಾಗಮವು ಬೇಕಾಗಿತ್ತು. ಸ್ವರ್ಗಲೋಕದ ಪರಿಸ್ಥಿತಿಯಂತೂ ಅವಳಿಗೆ ಗೊತ್ತೇ ಇದ್ದಿತು.

ಆಗ ಅವಳು ' ಮಹಾರಾಜರೇ, ಸ್ವರ್ಗವು ಒಂದು ಸಂತೆ ಇದ್ದಂತೆ ಎಂದರೂ ನಡೆದೀತು. ಯಾರ ಹತ್ತಿರ ಹಣವಿದೆಯೋ ಅಂಥವರಿಗೆ ಸಂತೆ ಯಲ್ಲಿ ಹೆಚ್ಚಿನ ಎಲ್ಲ ಸಾಮಾನುಗಳೂ ದೊರೆಯುವದು ಹೇಗೆ ಕಠಿಣವಿರುವ ದಿಲ್ಲವೋ ಹಾಗೆ ಯಾರ ಹತ್ತಿರ ಪುಣ್ಯಸಂಚಯವಿದೆಯೋ ಅಂಥವರಿಗೆ ಸ್ವರ್ಗದಲ್ಲಿಯ ಬೇಕಾದ ವಸ್ತುಗಳು ದೊರೆಯಲು ಅಶಕ್ಯವಿರುವದಿಲ್ಲ. ಅಲ್ಲಿ ಪುಣ್ಯದ ಅಪೇಕ್ಷೆಯಿದ್ದರೆ ಸಾಕು. ಸರ್ವವೂ ಸಾಧಿಸುವದು. ನಾವು ಅಪ್ಸರೆ ಯರೂ ಸ್ವರ್ಗದಲ್ಲಿಯ ವಸ್ತುಗಳೇ ಆಗಿದ್ದೇವೆ. ಯಾರ ಪುಣ್ಯವು ಎಷ್ಟೆಷ್ಟಿರು ವದೋ ಆ ಪ್ರಕಾರ ಅವರಿಗೆ ನಮ್ಮ ಪ್ರಾಪ್ತಿಯಾಗುತ್ತಿರುತ್ತದೆ. ಆದರೂ ನಮ್ಮ ಪ್ರಾಪ್ತಿಯಾಗುವ ಮುಖ್ಯ ಮಾರ್ಗವೆಂದರೆ ಗಂಧರ್ವನನ್ನು ಸಂತುಷ್ಟಿ ಗೊಳಿಸತಕ್ಕದ್ದು. ನಮ್ಮ ಅಧಿಪತಿಯು ಇಂದ್ರನೇ ಇದ್ದರೂ ಪ್ರತ್ಯಕ್ಷವಾಗಿ ಗಂಧರ್ವನ ಸತ್ತೆಯೇ ನಮ್ಮ ಮೇಲೆ ಇರುತ್ತದೆ. ಅವನ ಹೇಳಿಕೆಯಂತೆ ನಾವು ನಡೆಯಲೇಬೇಕು. ನಿಮಗೆ ನಾನು ದೇವಲೋಕದಲ್ಲಿಯೂ ದೊರೆಯ ಬೇಕೆಂಬ ಇಚ್ಛೆ ಇದ್ದರೆ ನೀವು ಆ ಗಂಧರ್ವನನ್ನು ಆರಾಧಿಸಬೇಕು. ಅಂದರೆ ಅವನು ನನ್ನನ್ನು ನಿಮ್ಮ ಸ್ವಾಧೀನಪಡಿಸುವನು ' ಎಂದು ಹೇಳಿದಳು.

ಈ ಉಪಾಯವು ರಾಜನಿಗೆ ಉಚಿತವೆನಿಸಿತು. ಅವನು ಗಂಧರ್ವನ ಆರಾಧನೆಯನ್ನು ಆರಂಭಿಸಿದನು. ಅದಕ್ಕೆ ಮೆಚ್ಚಿ ಗಂಧರ್ವನು ಪ್ರಸನ್ನನಾಗಿ ರಾಜನಿಗೆ ಒಂದು ಅಗ್ನಿಯ ಥಾಲಿಯನ್ನು ಕೊಟ್ಟನು. ತ್ರೇತಾಯುಗವು ಆರಂಭವಾಗಿ ಕರ್ಮಮಾರ್ಗ ಅರ್ಥಾತ್ ಯಜ್ಞಯಾಗಾದಿ ಕರ್ಮಗಳು ಈ ಲೋಕದಲ್ಲಿ ಆರಂಭವಾಗಲಿದ್ದವು. ಆ ಕೃತ್ಯಗಳು ರಾಜನ ಕೈಯಿಂದ ಆಗ ಬೇಕೆಂದು ಅವನು ರಾಜನಿಗೆ ಆ ಅಗ್ನಿಯ ಥಾಲಿಯನ್ನು ಕೊಟ್ಟನು.

ಗಂಧರ್ವನು ಕೊಟ್ಟ ಆ ಅಗ್ನಿಯ ಥಾಲಿಯೇ ಉರ್ವಶಿಯ ಪ್ರಾಪ್ತಿಯ ಮುಖ್ಯ ಸಾಧನವೆಂದು ಬಗೆದು ರಾಜನು ಅತ್ಯಾನಂದದಿಂದ ಅದನ್ನು ಸ್ವೀಕರಿಸಿದನು. ಅದನ್ನು ತಂದು ಮನೆಯಲ್ಲಿಟ್ಟನು. ಅದರ ಉಪಯೋಗವನ್ನು ಹೇಗೆ ಮಾಡಿಕೊಳ್ಳಬೇಕು ಎಂಬ ವಿಚಾರವು ಅವನಿಗೆ ಬಿದ್ದಿತು. ಕೆಲವೊಂದು ಕಾಲ ವಿಚಾರತಂದ್ರಿಯಲ್ಲಿ ಕಳೆದ ನಂತರ ಅಗ್ನಿಸ್ಥಾಲಿಯನ್ನು ಇಟ್ಟ ಸ್ಥಳಕ್ಕೆ ಬಂದು ನೋಡಿದನು. ಅಲ್ಲಿ ಆ ಅಗ್ನಿಸ್ಥಾಲಿಯ ಬದಲು ಅಶ್ವತ್ಥ ಹಾಗೂ ಶಮೀ ವೃಕ್ಷಗಳುಂಟಾದುದು ಕಂಡುಬಂದಿತು. ಅದರಿಂದ ರಾಜನಿಗೆ ಅತ್ಯಾಶ್ಚರ್ಯವೆನಿಸಿತು.

ತ್ರೇತಾಯುಗದ ಪ್ರವೃತ್ತಿಯಿಂದ ಅವನ ಮನಸು ಪ್ರೇರೇಪಿತವಾಗಿ ಅವನು ಆ ಅಶ್ವತ್ಥವೃಕ್ಷದಿಂದ ಎರಡು ಅರಣಿಗಳನ್ನೂ ಶಮೀವೃಕ್ಷದಿಂದ ಒಂದು ಕಡೆಗೋಲನ್ನೂ ಮಾಡಿದನು. ಆ ಎರಡೂ ಅರಣಿಗಳ ನಡುವೆ ಆ ಕಡೆಗೋಲನ್ನಿಟ್ಟು ಅವನು ಮಂಥನ ಮಾಡತೊಡಗಿದನು. ಗಂಧರ್ವನು ದಯಪಾಲಿಸಿದ ತಾಲಿಯಲ್ಲಿ ಅಗ್ನಿಯು ಇತ್ತು. ಅದು ಏಕಾಏಕಿ ಮಾಯವಾಗಿ ಅಶ್ವತ್ಥ-ಶಮೀವೃಕ್ಷಗಳು ಉಂಟಾದ್ದರಿಂದ ಆ ಅಗ್ನಿಯು ಅವೆರಡೂ ವೃಕ್ಷಗಳಲ್ಲಿ ಅಡಕಹೊಂದಿರಬೇಕೆಂದು ಭಾವಿಸಿ ಅವೆರಡೂ ವೃಕ್ಷಗಳ ಕಟ್ಟಿಗೆಯನ್ನು ಕಡೆದನು. ಅದರಿಂದ ಅಡಗಿಹೋದ ಬೆಂಕಿಯು ಪುನಃ ಪ್ರಕಟವಾದೀತು ಎಂದು ಬಗೆದು ಮಂಥನವನ್ನಾರಂಭಿಸಿದನು.

ಆ ಮಂಥನದ ಘರ್ಷಣೆಯಿಂದ ಬೆಂಕಿಯು ಹೊರಟಿತು. ಆಗ ರಾಜನಿಗೆ ಹಿಡಿಸಲಾರದಷ್ಟು ಆನಂದವಾಯಿತು. ಅವನು ಆ ಅಗ್ನಿಯನ್ನು ತನ್ನ ಪುತ್ರನೆಂದೇ ಭಾವಿಸಿಕೊಂಡನು. ರಾಜನು ಅದನ್ನೇ ಹೊತ್ತಿಸಿ ಗಂಧರ್ವನನ್ನು

ನ್ವೇಷಿಸಿ ಋಗ್ವೇದ, ಯಜುರ್ವೇದ, ಸಾಮವೇದಗಳೊಳಗಿನ ಮಂತ್ರೋಚ್ಚಾರಣೆ ಮಾಡಿ ಹವನ ಮಾಡಿದನು. ಅದರಿಂದ ಗಂಧರ್ವನು ಪ್ರಸನ್ನನಾದನು. ಅವನು ರಾಜನಿಗೆ ಉರ್ವಶಿಯ ಸಮಾಗಮವು ಸ್ವರ್ಗದಲ್ಲಿ ಚಿರಕಾಲ ಲಭಿಸುವಂತೆ ಯೋಜನೆಯನ್ನು ಮಾಡಿದನು.

ದೇಹಪತನವಾಗುವ ಸಮಯ ಬರುತ್ತಲೆ ರಾಜನು ಪುತ್ರನಾದ ಆಯು ಯುವರಾಜನನ್ನು ಕರೆದು ಕೊನೆಯ ಹಿತವಚನಗಳನ್ನು ಹೇಳಿದನು. ರಾಜ್ಯದ ಸರ್ವಾಧಿಕಾರವನ್ನೂ ಅವನಿಗೊಪ್ಪಿಸಿ ಆನಂದದಿಂದ ಅವನು ತನ್ನ ಮೃತ್ಯು ಶರೀರವನ್ನು ತ್ಯಜಿಸಿದ ಕೂಡಲೆ ಅವನಿಗೆ ದಿವ್ಯದೇಹವು ಪ್ರಾಪ್ತವಾಯಿತು.

ರಾಜನು ಶರೀರ ತ್ಯಾಗಮಾಡಿದೊಡನೆಯೇ ಉರ್ವಶಿಯು ತನ್ನ ಮಗನನ್ನು ಮುದ್ದಾಡಿ, ಸ್ವರ್ಗಕ್ಕೆ ಹೊರಟೇಬಿಟ್ಟಳು. ಉರ್ವಶಿಯು ಸ್ವರ್ಗವನ್ನು ಇನ್ನೂ ಮುಟ್ಟಿದ್ದಳೋ ಇಲ್ಲವೋ ಎನ್ನುವಷ್ಟರಲ್ಲಿ ಅವಳ ಬೆನ್ನಹಿಂದೆಯೇ ರಾಜನು ದಿವ್ಯದೇಹಧಾರಿಯಾಗಿ ಅಲ್ಲಿ ಬಂದೇ ಬಿಟ್ಟನು. ಇಲ್ಲಿಯವರೆಗೆ ಅವನ ಆತ್ಮವು ಮೃತ್ಯುಶರೀರದಲ್ಲಿತ್ತು. ಆದ್ದರಿಂದ ದೇವಲೋಕದಲ್ಲಿ ವಾಸಿಸುವ ಉರ್ವಶಿಯ ಸಮಾಗಮವಾಗಲು ಅನೇಕ ರೀತಿಯಿಂದ ಯತ್ನಮಾಡಬೇಕಾಯಿತು. ಆದರೆ ಈಗ ನಿರಂತರವಾಗಿ ಉರ್ವಶಿಯ ಸಮಾಗಮವಾಗಲು ಪ್ರತಿಬಂಧಕವಾಗಿರುವ ಮಾನವ ಶರೀರವನ್ನು ತ್ಯಾಗಮಾಡಿದ್ದರಿಂದ ಇನ್ನೂ ಅದರ ಭೀತಿಯೇ ಉಳಿದಿರಲಿಲ್ಲ. ಅತ್ಯುತ್ಕಟವಾದ ತನ್ನ ಪುಣ್ಯದಿಂದ ಅವನು ತನ್ನ ಪ್ರಿಯಕರಳಾದ ಉರ್ವಶಿಯ ಸಮಾಗಮದಲ್ಲಿ ಚಿರಕಾಲ ದಿವ್ಯ ಭೋಗವನ್ನು ಭೋಗಿಸುತ್ತ ಆನಂದದಿಂದ ಕಾಲವನ್ನು ಕಳೆಯತೊಡಗಿದನು.

---

# ಲಲಿತ ಸಾಹಿತ್ಯಮಾಲೆ, ಧಾರವಾಡ

ವರುಷಕ್ಕೆ ಆರುನೂರು ಪುಟದ ಸಾಹಿತ್ಯ

**ವಾರ್ಷಿಕ ಚಂದಾ ಅಂಚೆ ಸೇರಿ ಆರು ರೂ.**

## — ಈಗ ದೊರೆಯುವ ಪ್ರಕಟನೆಗಳು —

| | | | | | |
|---|---|---|---|---|---|
| ೧ | ಮುದ್ದಿನ ಕಣಿ (ಚೆಕ್ಹೊವ್‌ನ ಕಥೆಗಳು) | ಚುಳಕಿ | ೧ | ೦ | ೦ |
| ೨ | ಸುಮತಿ-ಅನುರಾಧಾ (ನೀಳ್ಗತೆಗಳು) | ಶರಚ್ಚಂದ್ರ | ೧ | ೪ | ೦ |
| ೩ | ಕೊನೆಯ ದಿನಗಳು (ನೀಳ್ಗತೆಗಳು) | ಭಾರತೀಸುತ | ೧ | ೮ | ೦ |
| ೪ | ಮುರುಕು ಮಂಟಪ (ಕಾದಂಬರಿ) | ಅನಂತನಾರಾಯಣ | ೧ | ೧೨ | ೦ |
| ೫ | ಪುರುಷಾರ್ಥ ,, | ಶ್ರೀರಂಗ | ೨ | ೦ | ೦ |
| ೬ | ಪ್ರತಿ ಸರಕಾರ ,, | ಮಿರ್ಜಿ ಅಣ್ಣಾರಾಯ | ೧ | ೧೨ | ೦ |
| ೭ | ಸ್ಮಶಾನ ವೈರಾಗ್ಯ (ಟಾಲ್‌ಸ್ಟಾಯ್) | ಚುಳಕಿ | ೧ | ೮ | ೦ |
| ೮ | ಮದಗಜಮಲ್ಲ (ವೀರಕಥೆಗಳು) | ದೇ. ಪಾಂಡುರಂಗರಾವ್ | ೧ | ೦ | ೦ |
| ೯ | ಪರಿವರ್ತನ (ಕಾದಂಬರಿ) | ನಿಶಾಕಾಂತ | ೨ | ೮ | ೦ |
| ೧೦ | ಸ್ವಪ್ನಜೀವಿ ,, | ತ್ರಿವಿಕ್ರಮ | ೧ | ೮ | ೦ |
| ೧೧ | ಜೀವನ ಪಾಠಗಳು (ಪತ್ರ-ಪ್ರಬಂಧಗಳು) | ಪ್ರಿ. ಗೋಕಾಕ | ೧ | ೦ | ೦ |
| ೧೨ | ದೋರಾ-ಇತರ ಕಥೆಗಳು (ಅನುವಾದ) | ಗೋ. ವೆಂ. ಚುಳಕಿ | ೧ | ೦ | ೦ |
| ೧೩ | ಚಿರವಿರಹಿ (ಕಾದಂಬರಿ) | ಬೆಳ್ಳಿ ರಾಮಚಂದ್ರರಾವ್ | ೪ | ೦ | ೦ |
| ೧೪ | ಹಾಸು-ಹೊಕ್ಕು (ಸಂ-ಕಥನಗಳು) | ದತ್ತಾತ್ರೇಯ | ೧ | ೪ | ೦ |
| ೧೫ | ಮುಳ್ಳುಬೇಲಿ (ಕಾದಂಬರಿ) | ಅನು : ಚಾಲುಕ್ಯ | ೨ | ೦ | ೦ |
| ೧೬ | ಉಪಾಯ ವೇದಾಂತ (ಹರಟೆಗಳು) | ನಾ. ಕಸ್ತೂರಿ | ೧ | ೧೨ | ೦ |
| ೧೭ | ರಕ್ತಧ ರೂಪಾಯಿ (ಕಾದಂಬರಿ) | ಸೇ. ನಮಿರಾಜ ಮಲ್ಲ | ೧ | ೮ | ೦ |
| ೧೮ | ಸರದಾರ ವಲ್ಲಭಭಾಯಿ (ಚರಿತ್ರೆ) | ಸಿದ್ದವನಹಳ್ಳಿ ಕೃಷ್ಣಶರ್ಮಾ | ೧ | ೮ | ೦ |
| ೧೯ | ರಾಜಾ ಪುರೂರವ (ಅನುವಾದ) | ಗೋ. ವೆಂ. ಚುಳಕಿ | ೧ | ೮ | ೦ |
| ೨೦ | ಪರಿಹಾರ (ಕಾದಂಬರಿ) | ದತ್ತಾತ್ರೇಯ | (ಅಚ್ಚಿನಲ್ಲಿ) | | |

ಎಲ್ಲ ಪ್ರಕಟನೆಗಳ ಉತ್ತಮ (ಲೈಬ್ರರಿ) ಪ್ರತಿಗೆ ಒಂದೊಂದು ರೂಪಾಯಿ ಹೆಚ್ಚು. ಎಲ್ಲ ಪ್ರಕಟನೆಗಳನ್ನು ಒಮ್ಮೆಲೆ ಕೊಳ್ಳುವವರಿಗೆ ಅಂಚೆಯ ವೆಚ್ಚ ಉಚಿತ.